# ಪ್ರಿಯದರ್ಶನಂ





ಲೇಖಕ ಮತ್ತು ಪ್ರಕಾಶಕ:
ಯಂ. ಸೀತಾರಾಮಯ್ಯ,
ಚೊಕ್ಕಾಡಿ, (ದ.ಕ.)



1953

ಒಂದೂವರೆ ರೂಪಾಯಿ

# ಪ್ರಿಯದರ್ಶನಂ

ಸುಖವು ಶಾಶ್ವತವಲ್ಲ
ದುಃಖ ಶಾಶ್ವತವಲ್ಲ
ಸುಖದುಃಖದಾ
  ಸೂತ್ರಹಸ್ತದ ವಿಧಿಯೆ
ಶಾಶ್ವತ ಸತ್ಯ ನಿತ್ಯ!

# ಪ್ರಿಯದರ್ಶನಂ

★

ಲೇಖಕ ಮತ್ತು ಪ್ರಕಾಶಕ:
ಯಂ. ಸೀತಾರಾಮಯ್ಯ,
ಚೊಕ್ಕಾಡಿ, (ದ. ಕ.)

★

1953

# ಪ್ರಿಯದರ್ಶನಂ

(ಪ್ರಸ್ತಾವನೆ)

★



ಈ ಕೃತಿಯು ಮಹಾಭಾರತದ ಗನಿಯಿಂದ ಆಯ್ದುಕೊಂಡ ಕಥಾರತ್ನದ ಒಂದು ಭಾಗ ಮಾತ್ರ. ನಳ–ದಮಯಂತಿಯರ ಕಥೆಯನ್ನು ಅರಿಯದ ಜನರಿಲ್ಲ. ರಾಮಾಯಣದಲ್ಲಿಯೂ ಈ ಕಥೆಯು ಹೇಳಲ್ಪಟ್ಟಿದೆ. ವನವಾಸಿಯಾಗಿದ್ದ ಶ್ರೀರಾಮನಿಗೂ ಧರ್ಮರಾಯನಿಗೂ ಪ್ರಾಸಂಗಿಕವಾಗಿ, ಮಹಾತ್ಮರಾದ ಋಷಿಗಳು ಈ ಕಥೆಯನ್ನು ಹೇಳಿ ನೊಂದ ಹೃದಯಗಳನ್ನು ಸಮಾಧಾನಮಾಡಿದ್ದರು. ಆದರೆ ಇಲ್ಲಿ ಇದರ ಉತ್ತರಭಾಗವನ್ನು ಮಾತ್ರ ತಿಳಿದಂತೆ ಚಿತ್ರಿಸಲು ಪ್ರಯತ್ನಿಸಿದ್ದೇನೆ. ಅಲ್ಲಲ್ಲಿ ಸಹಜತೆಯ ದೃಷ್ಟಿಯಿಂದ ಒಂದಷ್ಟಿಷ್ಟು ವ್ಯತ್ಯಾಸಪಡಿಸಿದ್ದೇನೆ.

ಜೂಜಿನಲ್ಲಿ ಎಲ್ಲವನ್ನೂ ಸೋತು, ಸತಿಸಹಿತ ನಳನು ವಿಂಧ್ಯಾಟವಿಯನ್ನು ಸೇರುವಲ್ಲಿಂದ ಈ ಕೃತಿಯು ಪ್ರಾರಂಭವಾಗುತ್ತದೆ. ಮುಂದೆ ಅವರಿಬ್ಬರೂ ಒಂದೇ ಬಟ್ಟೆಯಲ್ಲಿ ಕೆಲವು ದೂರ ನಡೆದರೂ ಮುನಿದ ವಿಧಿಯು ಅವರನ್ನು ವಿರಹಕ್ಕೆ ದೂಡುತ್ತದೆ. ನಳನು ತನ್ನ ಧರ್ಮಪತ್ನಿಯಾದ ದಮಯಂತಿಯನ್ನು ಕಾಡಿನ ಮಧ್ಯೆ ನಿದ್ರಿಸುತ್ತಿದ್ದಾಗ ಹೇಳದೇ ಬಿಟ್ಟು ನಡೆಯುತ್ತಾನೆ. ಆ ಮೇಲೆ ಇಬ್ಬರದೂ ಬೇರೆ ಬೇರೆ ದಾರಿ ಬೇರೆ ಬೇರೆ ಕಷ್ಟಗಳು. ಕೊನೆಗೆ ತನ್ನ ತಂದೆಯ ಮನೆಯಲ್ಲಿ ದಮಯಂತಿಯು ತನ್ನರಸನನ್ನು ಕಾಣುತ್ತಾಳೆ. ಕಷ್ಟಗಳು ಏನೇ ಬಂದಿದ್ದರೂ, ಅನನ್ಯವಾದ ಪತಿಭಕ್ತಿಯಿಂದ ನಿಷ್ಕಳಂಕವಾದ ಪ್ರೇಮದಿಂದ, ಸಾಧ್ವಿಯಾದ ದಮಯಂತಿಯು ತನ್ನ ಧರ್ಮವನ್ನು ಪಾಲಿಸಿದಳು; ತಾನೊಲಿದು, ತನ್ನನ್ನೂ ಒಲಿದಿದ್ದ ತನ್ನರಸನನ್ನು ಬಹು ಕಷ್ಟದಿಂದ ತಿರುಗಿಪಡೆದಳು, ನೈಜಪ್ರೇಮದ ಸುಸ್ವರೂಪವನ್ನು ಜಗತ್ತಿಗೆ ತೋರಿಸಿ "ಪ್ರಿಯದರ್ಶನ" ವನ್ನು ಪಡೆದಳು.

ಪತಿವ್ರತೆಯರ ಕಥೆಯು ಪುಣ್ಯಕಥೆ. ಅವರ ಕುರಿತು ಹೊಗಳದ ಕವಿಗಳಿಲ್ಲ; ಹೊಗಳಿ ಮುಗಿಸಿದ ಕಾವ್ಯಗಳಿಲ್ಲ. ನಮ್ಮ ಸಂಸ್ಕೃತಿಯಲ್ಲಿ ನೀತಿಗೆ ಬಹುದೊಡ್ಡ ಸ್ಥಾನವನ್ನು ಕೊಟ್ಟಿದ್ದಾರೆ. ಧರ್ಮಶಾಸ್ತ್ರಗಳೂ ಅದನ್ನೇ ಎತ್ತಿಕಟ್ಟಿವೆ. ಹಲವು ಪುರುಷರ ಪಾಪಮಯ ದೃಷ್ಟಿಯನ್ನು ತನ್ನೆಡೆಗೆ ಸೆಳೆಯುವ ಪ್ರಾಕೃತಿಕ ಸಂಪತ್ತು ಹೆಣ್ಣನ್ನು ಕೂಡಿದ್ದರಿಂದಲೇ ಸ್ತ್ರೀಯರಿಗೆ ತಮ್ಮ ನೀತಿಯನ್ನು ಉಳಿಸಿಕೊಳ್ಳಲು ದುಸ್ತರವಾಗುತ್ತದೆ. ಆದ್ದರಿಂದಲೇ ನಮ್ಮ ಪುರಾಣಗಳು ಎಷ್ಟೆಷ್ಟೋ ಆದರ್ಶ ದಾಂಪತ್ಯಗಳ ಕುರಿತು ಉಲ್ಲೇಖಿಸಿವೆ. ಅವುಗಳನ್ನೋದುವಾಗ, ಕೇಳುವಾಗ, ನಮ್ಮ ಮನಸ್ಸು ತಿಳಿಯಾಗಿ ಆನಂದವಾಗುತ್ತದೆ. ನಿತ್ಯಜೀವನದಲ್ಲಿಯೂ, ನಾವು ಅನೇಕ ಕುಟುಂಬಗಳನ್ನು ನೋಡುತ್ತೇವೆ; ಅವರ ಕುರಿತು ಕೇಳುತ್ತೇವೆ. ಸುಖವಿರಲಿ, ಕಷ್ಟವಿರಲಿ, ಐಶ್ವರ್ಯವಿರಲಿ, ಬಡತನವೇ ಇರಲಿ, ಗಂಡ ಹೆಂಡಿರು ಒಲಿದೊಲಿದು ಒಂದೇ ಮನಸ್ಸಿನಿಂದ ಅವುಗಳನ್ನು ಅನುಭವಿಸುತ್ತ ಇದ್ದರೆ; ಅಂಥವರನ್ನು ಕಂಡಾಗ ಅವರ ವಿಷಯ ಕೇಳಿದಾಗ ಆ ದಾಂಪತ್ಯದ ಬಗ್ಗೆ ಎಲ್ಲಿಲ್ಲದ ಸಂತೋಷವಾಗುತ್ತದೆ; ಅಭಿಮಾನ ಪಡುತ್ತೇವೆ. ಆದರೆ ಅನ್ಯಥಾ ಕಂಡು ಕೇಳಿದಾಗ ಅಯ್ಯೋ ಅನ್ನಿಸುತ್ತದೆ. ಇದೇ ವಿಷಯಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ನೂರಾರು ಕಥೆಕಾದಂಬರಿಗಳು ಕನ್ನಡ ಸಾಹಿತ್ಯದಲ್ಲಿ ಹುಟ್ಟಿವೆ, ಈಗಲೂ ಹುಟ್ಟುತ್ತಿವೆ. ಧರ್ಮನಿರತರಾದ ಸಾಧ್ವಿಯರು ತಮ್ಮ ಶೀಲದಿಂದ ಜಗತ್ತಿಗೇ ಪ್ರಿಯವಾದ ದರ್ಶನವನ್ನೀಯುತ್ತಾರೆ. ಲೋಕವೇ ಅವರನ್ನು ಮೆಚ್ಚುತ್ತದೆ, ಕೊಂಡಾಡುತ್ತದೆ. ಆದ್ದರಿಂದಲೇ ಇರಬೇಕು, "ಎಲ್ಲೆಲ್ಲಿ ನಾರಿಯರನ್ನು ಗೌರವಿಸುವರೋ ಅಲ್ಲೆಲ್ಲಾ ದೇವತೆಗಳು ಪ್ರಸನ್ನರಾಗುವ"ರೆಂಬ ಮಹರ್ಷಿಗಳ ಮಾತು ಹುಟ್ಟಿದ್ದು. ಈ ಮಾತಿನ ಸತ್ಯವನ್ನು ಪುರಾಣಗಳೂ, ಇತಿಹಾಸಗಳೂ ಸಾರಿವೆ ಮಾತ್ರವಲ್ಲ, ನಳದಮಯಂತಿಯರ ಉಪಾಖ್ಯಾನದಲ್ಲೂ ಇದೇ ಸತ್ಯವು ಸ್ಪಷ್ಟವಾಗಿ ಕಾಣುತ್ತದೆ. ಇಂದ್ರಾದಿದೇವತೆಗಳು ದಮಯಂತಿಯನ್ನು ಮದುವೆಯಾಗೋಣವೆಂತ ಬಂದು, ನಳನಿಂದಲೇ ಸಂಧಾನಮಾಡಿಸಿ, ಅವರಿಬ್ಬರ ನೀತಿಯ ದೃಢತೆಯನ್ನು ಕಂಡು ಮೆಚ್ಚಿ ವರವಿತ್ತರು. ನಿರ್ಗತಿಕಳಾದ ದಮಯಂತಿಗೆ ಆಶ್ರಯವಿತ್ತು ಗೌರವಿಸಿ,

ಕಾಡಾನೆಗಳ ಬಾಧೆಯಿಂದ ವರ್ತಕರು ಪಾರಾದರು. ಅಬಲೆಯಾದ ಅವಳನ್ನು ಕೆಣಕಿ ವ್ಯಾಧನೋರ್ವನು ಮೃತಿಯನ್ನೈದಿದನು.

ಈ ಕೃತಿಯಲ್ಲಿ, ಪುನರ್ಮಿಲನವೇ ಮುಖ್ಯವಾಗಿದ್ದರೂ, ಎಲ್ಲವನ್ನೂ ಕಳೆದುಕೊಂಡು ದರಿದ್ರನಾದ ತನ್ನ ಪತಿಯ ಸಹಧರ್ಮಿಣಿಯಾಗಿ ಜತೆಯಲ್ಲೇ ಇದ್ದುಕೊಂಡು, ಅವನಿಂದಲೇ ವಂಚಿತಳಾದ ದಮಯಂತಿಯು ತನ್ನ ಸಾಹಸದಿಂದಲೇ ತನ್ನರಸನನ್ನು ಪಡೆದದ್ದರಿಂದ ಇದನ್ನು "ಪ್ರಿಯ ದರ್ಶನ"ವೆಂದು ಹೇಳಲಾಗಿದೆ. ಪುರಾಣಕ್ಕೂ ಪುರಾಣವಾದ ಈ ಕಥೆಯನ್ನಾಯ್ದುಕೊಂಡು, ನನ್ನ ಮನಸ್ಸಿನಲ್ಲಿ ಮೂಡಿದ ಭಾವನೆಗಳನ್ನೂ, ಕಲ್ಪನೆಗಳನ್ನೂ ಸೇರಿಸಿಕೊಂಡು ಇದನ್ನು ಬರೆದಿದ್ದೇನೆ. ಜೀವನದಲ್ಲಿ ಯಾವುದು ಅತಿ ಪ್ರಿಯವೋ ಆ ಪ್ರೇಮಧರ್ಮವನ್ನೂ ಆ ತತ್ವದ ಸಾರವನ್ನೂ, ಭಾರತಕಾರನು ಈ ಉಪಾಖ್ಯಾನದಲ್ಲಿ ನಿರೂಪಿಸಿದಂತೆ ಕಂಡುಕೊಂಡಾಗ ಮಾತ್ರ "ಪ್ರಿಯದರ್ಶನ"ವಾಗಬಹುದು. ಹಗಲು ದೀಪವನ್ನುರಿಸಲು ತೊಡಗಿದುದು ದೇವತಾರಾಧನೆಗಾಗಿ. ಪೂಜೆಗಾಗಿ ಉರಿಸಿದ ದೀಪವು ಎಣ್ಣೆಬತ್ತಿಗಳ ಕೊರತೆಯಿಂದ ಪೂಜಿಸುವ ಪ್ರದೇಶವನ್ನು ಬೆಳಗಲು ಅಸಮರ್ಥವಾಗಬಹುದು. ಆದರೂ ಪೂಜಿಸುವವನಿಗೆ ತನ್ನ ಮುಂದೊಂದು 'ಜ್ಯೋತಿ'ಯು ಮಿನುಗುತ್ತಿದೆ ಎಂಬರಿವಾದರೆ ಸಾಕು. ಅದರಿಂದಲೇ "ಪ್ರಿಯದರ್ಶನ"ವಾಗಬಹುದು.

ಮುದ್ರಾರಾಕ್ಷಸನ ಹಾವಳಿಯೂ, ನನ್ನ ತಿಳಿವಿನ ದೋಷವೂ, ಅಲ್ಲಲ್ಲಿ ಕಾಣಿಸಬಹುದು; ಸಹೃದಯರು ಅದನ್ನು ಮನ್ನಿಸಬೇಕಾಗಿ ಪ್ರಾರ್ಥಿಸುತ್ತೇನೆ.

ಅನೇಕ ಮಂದಿ ಸ್ನೇಹಿತರು ಇದನ್ನು ಬರೆಯುತ್ತಿರುವಾಗಲೇ ಓದಿ, ಓದಿಸಿ ಬೆನ್ನು ಚಪ್ಪರಿಸಿದರು, ಹುರುಪುಗೊಟ್ಟರು. ತಪ್ಪುಗಳು ಎಷ್ಟಿವೆಯೋ ಎಂಬ ಅನುಮಾನವು ನನ್ನನ್ನು ಬಾಧಿಸುತ್ತಿರುವಾಗಲೇ, ನನ್ನ ಆತ್ಮೀಯರಾದ ಶ್ರೀಮಾನ್ ತೆಕ್ಕುಂಜೆ ಗೋಪಾಲಕೃಷ್ಣ ಭಟ್ಟ, ಎಂ. ಎ., ಕನ್ನಡ ಪ್ರಾಧ್ಯಾಪಕ, ಸೈಂಟ್ ಎಲೋಸಿಯಸ್ ಕಾಲೇಜ್, ಮಂಗಳೂರು, ಇವರು ಬಹು ಸಂತೋಷದಿಂದ ತಿದ್ದಿ ಸೂಕ್ತಸಲಹೆಗಳನ್ನಿತ್ತರು. 'ಉದಯ' ಪ್ರಿಂಟರಿಯ ಶ್ರೀ ಉಡುಪರು ಪ್ರೀತಿಯಿಂದ ಅಚ್ಚು ಹಾಕಿಸಿ

ದರು; ಅವರ ಸಹಾಯಕರೂ ಬಹಳ ಆಸಕ್ತಿವಹಿಸಿದ್ದರು; ಈ ಎಲ್ಲರಿಗೂ ನನ್ನ ಕೃತಜ್ಞತೆಗಳನ್ನರ್ಪಿಸಿ, ಬಾಲ್ಯದ ನನ್ನ ವಿದ್ಯಾಗುರುಗಳಾದ ಶ್ರೀಮಾನ್ ಕೊಟ್ಟೆಕ್ಯಾ ನಾರಾಯಣರಾಯರಿಗೆ ನನ್ನ ಹಾರ್ದಿಕ ವಂದನೆಗಳನ್ನರ್ಪಿಸಿ, ಈ ಕೃತಿಯನ್ನು ಶುದ್ಧಾಂತಃಕರಣಿಗಳಾದ ಕನ್ನಡಿಗರ ಮುಂದಿಡುತ್ತೇನೆ.

ಇತಿ ತನ್ಮ,

ಸೀತಾರಾಮಯ್ಯ.

ಶ್ರೀ ರಾಮಮಂದಿರಂ
ಚೊಕ್ಕಾಡಿ, ದ. ಕ.
ತಾ. 28-5-'53
ವಸಂತ ಪೂರ್ಣಿಮಾ.

ಶ್ರೀ

ಓಂಕಾರಮಯಶಬ್ದ ಝೇಂಕಾರದಿಂದೆ ಜಡಜಗವನೆಬ್ಬಿಸುತೆ ಹೇ ದೇವಿ!! ಸುಸ್ವರಿತ ನಾದಮಾಧುರ್ಯದಿಂ ನಿನ್ನ ಕೈಯ್ಯಾ ವೀಣೆ ಲೋಕತ್ರಯವ ರಂಜಿಪುದಾದೊಡಂ, ನಿನ್ನಡಿಯ ರಜಃಕಣಂ, ಕವಿಕುಲದ ಪೆರ್ಚುಗೆಗೆ ಕಾರಣಮಾದೊಡಂ, ನಿನ್ನೊಲುಮೆಯಾ ಕೃಪೆಯ ದಿಟ್ಟಿಯೆ ಮಾನವನ ಧೀಶಕ್ತಿಗೆ ಮೂಲವಾಗಿರ್ದೊಡಂ, ನಿನ್ನಮುಂಜೆರಗ ತಂಬೆಲರೆ ಜನಜೀವನದ ಉಸಿರಾಗಿರ್ದೊಡಂ, ಮೇಣ್ ನೀನೇ ಸೃಷ್ಟಿಕರ್ತನ ಮೊದಲ ಕೃತಿಯಾಗಿರ್ದೊಡಂ ನಿನ್ನಂ ಪಡೆದ ನಾಲ್ಮೊಗಂ ವರ್ತಿಪಾ ಲೀಲೆ ಘನತರಂ ಅತಿವಿಚಿತ್ರಂ; ಅದುವೆ ಬ್ರಹ್ಮಂ.

ವಿಶ್ವಸೃಷ್ಟಿಗೆ ಮೊದಲು ಶೂನ್ಯತೆಯ ಕತ್ತಲಲಿ ಹಿರಣ್ಯಗರ್ಭಂ ಬಯಸೆ ವಿಧಿಮನೋಭವೆಯಾಗಿ ಜನಿಸಿ ಹೇ ಜನನಿ, ಜನ್ಮದಿಂ ಬಿಜ್ಜೆಯೊಡೆತನಮಂ ಪಡೆದು ಮತ್ತಾ ವಿಧಿಯೆ ಬಲಾತ್ಕರಿಸಲ್, ಮಗಳಾಗಿ ಪಡೆದ ಪಿತನಂ, ಆ ಕಮಲಭವನಂ ಕೈಪಿಡಿದು ವರಿಸಿ ಆ ಬೃಹಲ್ಲೀಲಾ ವೈಚಿತ್ರ್ಯಕ್ಕೆ ಮೊದಲ ಕಾಣಿಕೆಯಾದೆ ಹೇ ಕಲ್ಯಾಣಿ; ನಿನ್ನಂ ಪಡೆದ ವಿಧಿ ನಿನ್ನನೇ ಬಿಡದಿರಲ್ ಇನ್ನುಳಿದ ಪ್ರಾಪಂಚಿಕರ ಪಾಡೇನು?

ಆದೊಡಂ ನಿನ್ನ ಕಂದರಂ ಕಾಯಲೆಂದೇ ಮೊಲೆವಾಲ ಅಮೃತ ವರ್ಷಮಂ ಚೆಲ್ಲುತಿಹೆ ತಾಯೆ! ಅದರೊಂದು ಹನಿಯ ಚಪ್ಪರಿಸಿ ತೊದಲುತಿಹುದೆನ್ನ ರಸನೆ; ಮಾತರಿಯದೀ ನಿನ್ನ ಮಗನಂ ಕಾಯ್ದೊಲಿದು ನುಡಿಯಿಸೆಲೆ ಜನನಿ ನಿನ್ನ ಮೆಚ್ಚಿನಾ ಸಿರಿಹರಕೆಗಾಶೀರ್ವಾದಮನ್ನಿತ್ತು.

ನನ್ನೆದೆಯೊಳೇನಂ ಬಿತ್ತಿ ನನಗಿತ್ತು ಪೊರೆವೆಯೋ ಮತ್ತದನೆ ನಿನ್ನ ಪದತಲಕ್ಕರ್ಪಿಸುತೆ ಧನ್ಯತೆಯ ಪಡೆವೆನಾಂ ನಿನ್ನಡಿಯ ದೃಢದಿಂದೆ ನಂಬಿ; ನಾಂ ಧನ್ಯನಪ್ಪಾಸೆಯೊಳ್ ಕೈಕೊಂಡ ಕೃತಿಯ ನೀಂ ಮೆಚ್ಚಿದೊಡೆ ಜನನಿ ಸಾಧ್ಯವಾದಪುದೆನಗೆನ್ನ ಕರ್ಮಸಿದ್ಧಿ.

---

ಭೂರಮೆಯು ಮುಡಿದಿರ್ದ ಮಲ್ಲಿಗೆಯ ಪೂದಂಡೆಯೆನಲ್ ಉನ್ನತೋನ್ನತವೈಶಿಷ್ಟ್ಯದಿಂ ಮೆರೆವ ಹಿಮಗಿರಿಯ ಸಾಲ್ ಉತ್ತರೋತ್ತರದಿ ರಂಜಿಸುತ್ತಿರೆ ತದ್ಗಿರಿಯ ದಕ್ಷಿಣದಿ ಸ್ವರ್ಣಗರ್ಭೆಯ ಪೇರುರಂ ತಾನೆನೆ ವಿಂಧ್ಯಾದ್ರಿಮಾಲೆಗಳ್ ಮೂಡಿರ್ದುವು. ಸುಮೇರುವಂ ಧಿಕ್ಕರಿಸಿ ಬಳೆಯ ತೊಡಗಿರ್ದಾ ವಿಂಧ್ಯಂ ಕುಂಭೋದ್ಭವಂ ತಲೆಯೇರಿತಡೆದು ಪ್ರಾರ್ಥಿಸಲ್ ಅಗಸ್ತ್ಯನಾಣತಿಯಂತೆ ಕುಗ್ಗಿತೆನಲ್ ಔನ್ನತ್ಯದೊಳ್ ಮೇರುವಿಂ ಕಿರಿದಾಗಿ ತರುಲತಾಗುಲ್ಮಕೋಟಿಯೊಳ್ ಪಿರಿದಾಗಿ ಆನತರಿಗಾಶ್ರಯವನಿತ್ತು ಸಾಮಂತಕೌಟುಂಬಿಕಂ ತಾನೆನುವ ಹಿರಿಯದೊರೆಯಾ ಪೆರ್ಮೆಯಿಂ ಪೆರ್ಚಿಟ್ಟಂ ಮೈಯೆತ್ತಿ ನಿಂದಿರ್ದುದು.

ಶ್ರೀಗಂಧಚಂದನದ ಸರ್ವೋತ್ಕೃಷ್ಟವಾದ ಹೆಮ್ಮರಗಳಂ ಕಾಯುಲೆಂದಾ ಕಂದರಪ್ರಾಂತದಲ್ಲಿ ಎಳಕಳಿಲೆಯ ಸ್ವರ್ಣಕಲಶಂಗಳಂ ಪಿಡಿದು ತಾನಾಗಿ ಬೆಳೆದು ನಿಂದಿತ್ತು ಬಿದಿರ ಮುಳ್ಳು ಕೋಂಟೆ. ತರತರದ ಪೊದರ ಮನೆಗಳಿಂ ಚಿಗಿದೆದ್ದು ಚಿಗುರೆಲೆಯಂ ಮೇವ ಮೊಲಗಳಂ ಪಿಡಿದುಂಡು ತಣಿವ ಹೆಬ್ಬಾವ್ಗಳಂ ತುಳಿವ ಕಾಡಾನೆಗಳ ಹಿಂಡು ಮಿಂದು ನೀರ್ಗುಡಿವ ಗಿರಿನದಿಯು ಹರಿಯುತಿರ್ದುದು ಅಗಳ್ತೆಯಂತೆ. ಪಹರಿಗಳತೆರದಿ "ಹುಂ" ಕಾರದಿಂ ಘರ್ಜಿಸುವ ಗೂಗೆಗಳಿಗಾಶ್ರಯವನಿತ್ತು ಅಲ್ಪತನಮಂ ತೋರ್ಪ ಧನಿಕನೊಲ್ ತನ್ನ ಗಾತ್ರಕೆ ಸಾಲದಾ ಕಿರುವಣ್ಗಳಿಂ ಮೆರೆವ ವಟವೃಕ್ಷಂಗಳಿರ್ದುವಲ್ಲಿ ಕೊತ್ತಳಂಗಳಾಗಿ. ಹಸಿರು ಹುಲ್ಲಂ ಮೇದು ಬಿದ್ದಹಣ್ಣಂ ತಿಂದು ಕೊಳ್ಳದೊಳ್ ನೀರ್ಕುಡಿವ ಬಡಮಿಗಂಗಳಂ ಬಡಿದು ತಿಂಬಾ ವ್ಯಾಘ್ರತತಿಯಿರ್ದುದಲ್ಲಿ ಕೃಪಣರಾವರ್ತಕರ ಪೋಲ್ತು. ಕಾಂಡದೊಳ್ ಕಾಡಲತೆಗಳ್ಗೆ ಆಶ್ರಯವನಿತ್ತು ಪೊಟರೆಯೊಳ್ ಪಕ್ಷಿನಿವಹಕ್ಕೆ ಗೂಡಿತ್ತು ರೆಂಬೆಮೂಡಿರ್ದಲ್ಲಿ ಬದನಿಕೆಗೆ ನೆಲೆಯಿತ್ತು ಬಂದುಂಬವರ್ಗೆ ತನಿವಣ್ಣಂ ತಿನಲಿತ್ತು ಮೆರೆದಿರ್ದುವಲ್ಲಿ ಚೂತವೃಕ್ಷಂಗಳ್ ಧರ್ಮಶಾಲೆಗಳ ತೆರದಿ. ಬಿಟ್ಟ ಹೂವಿನ ಸೊಬಗ ಸೂಸುತ್ತೆ ಸೌರಭವ ಗಾಳಿಯೊಳ್ ತೂರುತ್ತೆ

ಬಂದೆರಗಿದಾ ಬಂಡುಣಿಯು ಜೀವನವ ಹೀರುತ್ತೆ ಸೊಂಪಾಗಿ ಬೆಳೆದಿರ್ದು ವಲ್ಲಿ ಸಂಪಗೆಯು ಮರಂಗಳ್ ವಿಷಕನ್ಯೆಯರ ಹೋಲ್ದು. ಹೂಬಿಡದೆ ಹಣ್ಣಪ್ಪ ಅತ್ತಿಯು ಮರಂಗಳ್ ಮೆತ್ತನೆಯ ಹತ್ತಿಯಂ ಹಾರಿಸುವ ಬೂರುಗಂಗಳ್ ಇನ್ನುಳಿದ ನಾನಾತರದ ವೃಕ್ಷತತಿಗಳ್ ನಿಂದಿರ್ದುವಲ್ಲಿ ಚಿತ್ರಿಸಿದ ಕಲಾಭವನಂಗಳಂತೆ. ಅಡವಿಯಂ ತುಳಿತುಳಿದು ಕಾಡಮೃಗಂಗಳ್ ಪೊದೆಗಳಂ ಮೆಟ್ಟಿ 'ಕಡಿದಿರ್ದ ಸೀಳ್ದಾರಿಗಳಿರ್ದುವಲ್ಲಿ ರಾಯಬೀದಿಗಳತೆರದಿ. ಕಳೆದ ಶತಮಾನಂಗ[illegible]ಚೆಯಿಂ ತಮ್ಮಿರವಿಂಗೆಸಾಕ್ಷಿಯನ್ನೊರಿವಂತೆಹೆಬ್ಬಂಡೆಗಳಿರ್ದುವಲ್ಲಿ ಮಲಗಿ ನಿದ್ರಿಸುತಿದ್ದ ಮದ್ದಾನೆಗಳ ಬಗೆಯಿಂದ. ಕಾನನಂ ನಿರ್ಜನಾರಣ್ಯಮಾಗಿರ್ದೊಡಂ ಮರವೇರಿ ಚಿಗಿವ ಮರ್ಕಟಕಟಕಾಟ್ಟಹಾಸಂಗಳಿಂ ಬಿಲದ ನೆಲೆಮನೆಯು ಕೂಳ್ಮಿಗಂಗಳ ಘರ್ಜನೆಗಳಿಂ ಬೇಂಟೆಯಾಟದೊಳ್ ಬೊಬ್ಬಿರಿವ ಕೆನ್ನಾಯ್ಗಳಬ್ಬರಂಗಳಿಂ ಪ್ರಾಣಭಯದೊಳ್ ಚೀರಿಡುವ ಕಿರುಜಂತುಗಳಾರ್ತನಾದಂಗಳಿಂ ಬಗೆ ಬಗೆಯು ಖಗಸಂಕುಲದ ಕೂಜಿತಂಗಳಿಂ ಮೊರೆವ ಭರತಸಾಗರದಂತೆ ಜನನಿಬಿಡನಗರದಾ ಹೋರಟೆಯು ಕೋಲಾಹಲವ ಪೋಲ್ತಿರ್ದುದು.

ವಿಪಿನಗಂಭೀರದೊಳಿಂತುಟಾ ವಿಂಧ್ಯಾದ್ರಿ ಮೆರೆದಿರಲೊಂದುದಿನಂ ಹೊತ್ತಿಳಿವ ಹೊತ್ತಿಂಗೆ ತನ್ನ ಪೋಲ್ದಿಳಿವ ನೇಸರಂ ದಿಟ್ಟಿಸುತೆ ವಿಧಿಯ ವೈಚಿತ್ರ್ಯಕ್ಕೆ ತಲೆಯಂ ತೂಗುತ್ತೆ ನಿಟ್ಟುಸಿರ ಸೂಸುತ್ತೆ ಬಳಿವಿಡಿದು ನೆಳಲಂತೆ ಬರುತಿರ್ದ ತನ್ನಿನಿಯಳಂ ನೋಡುತ್ತೆ "ನೊಂದೆಯಾ" ಎಂದಾಕೆಯಂ ಸಂತೈಸುತ್ತೆ ಮೇಣ್ ಅಷ್ಟರೊಳೆ ವಿಶ್ವಜಿತ್‌ಯಾಗಮಂ ಪೂರೈಸಿರ್ದ ಭೂಪಾಲನಂತೊರ್ವ ಪುರುಷಸಿಂಹಂ ಮಡದಿಯೊಡವೆರಸಿ ನಡೆನಡೆದು ಬಂದು ಪೊಕ್ಕನದೊ ವಿಂಧ್ಯಾರಣ್ಯಮಂ ತನ್ನ ಬಾಳಿನ ಕಪ್ಪದಾ ಗಹ್ವರವ ತಾಂ ಪುಗುವ ತೆರದಿ. ಬೈಗುಗೆಂಪಿನ ಬಾನು ಮಲೆಯ ಮರಗಳ ಮೇಲೆ ಸೊಡರ ಕುಡಿಯಂತೆ ಕಾಣುತಿರೆ ಮೊಲೆಮರಿಗಳಿಂಚರವನಾಲಿಸುತೆ "ಓ" ಗೊಟ್ಟು ಗೂಡಿನೆಡೆಗೋಡುತಿಹ ಹಕ್ಕಿಗಳ ಹಾರಾಟದಾ ಸೊಲ್ಲು ಏರುತ್ತಮಿರೆ ಸತಿಪತಿಯರಿರ್ವರುಂ ನಡೆಯುತಿರ್ದರು ಮುಂದೆ ಗೊತ್ತುಗುರಿ ಇಲ್ಲದಾತಾಣಕ್ಕೆ. ಕಡಿದಾದ ಕಾಡಿನೊಳ್ ಒಂದಿನಿತು ದೂರಮಂ ಕ್ರಮಿಸಲ್ಕೆ ಕಾಣದಾದುದು ದಾರಿ. ಮತ್ತಿವರುಂ ಕಾಣದಾದರುಮೇನನುಂ. ಬಳಿ

ಯೊಳೇ ಹರಿಯುತಿಹ ಕಿರುಝರಿಯ ನೀರಿನೊಳಿಳಿದು ಇರ್ವರುಂ ಕೈ ಕಾಲುಮುಖಗಳಂ ತೊಳೆದು ಕೈಯೊಳೇ ನೀರಂ ಮೊಗೆದು ಕುಡಿದು ಹೆಬ್ಬಂಡೆಯೊಂದನೇರ್ದು ಮಂಡಿಸಿದರ್ ಸ್ಥಿರತೆಯೊಳ್ ಚಾಂಚಲ್ಯ ವೇರ್ದತೆರದಿ.

ಬಿಗಿದ ಮೌನದೊಳೆ ಸರಿಯುತಿರೆ ರಾತ್ರಿ ನಲ್ಲೆಯಂ ವೈದಡವಿ "ಕ್ರೂರವಿಧಿ ಪುಷ್ಕರನ ಮುಖದಿ ನಮ್ಮನಿಲ್ಲಿಗೆ ದೂಡುತೆಳೆಯಿತೆಲೆ ಕಾಂತೆ. ಏನು ಸೌಭಾಗ್ಯದಾ ಸಿರಿಯ ಸಂತಸದ ನಲ್ಮೆಯಾ ನಿಷಧದ ನಾಡು. ಅದ ನುಳಿದು ನಿರ್ಜನಾರಣ್ಯವನೆ ಹೊಗುವ ನಮ್ಮಿಪಾಡು" ಎಂದುಸುರಿ ದುಗುಡಮಂ ಬೆದಕಿ ನಿಟ್ಟುಸಿರ ಸೂಸುವಾ ಕಾಂತನಂ ಬಳಿಸಾರ್ದು ತನ್ನೆರಡು ತಳಿರಹಸ್ತಂಗಳೊಳ್ ಪತಿಯ ಪಾದದ್ವಯಂಗಳಂ ಪಿಡಿದು ಪಿಡಿದದನೆ ತನ್ನಕಣ್ಗಳಿಂಗೊತ್ತುತ್ತೆ ನುಡಿದಳಿಂತಾ ಕಾಂತೆ "ಹೃದಯೇಶ್ವರ ಏನಾದರೇನಂತೆ! ನಿನ್ನಡಿಯ ಸಾನ್ನಿಧ್ಯಮೇ ನನ್ನ ಸೌಭಾಗ್ಯಸಂಪದವು; ಮೇಣದರ ಸೇವೆಯೇ ಮೋಕ್ಷಸಾಧನವು. ಕನ್ಯೆಯಾಗಿದ್ದೆನ್ನ ಕೊರಳಿಂಗೆ ಮಾಂಗಲ್ಯಮಂ ಕರುಣಿಸುತೆ ಮುತ್ತೈದೆತನವನ್ನೊಲಿದಿತ್ತ ಪುಣ್ಯಪಾದಂ ಗಳಿವು ಪ್ರಾಣೇಶ್ವರ! ನಿಷಧೇಂದ್ರನ ಧರ್ಮಪತ್ನಿಯಾದೀ ದಮಯಂತಿಗೆ ಅದನುಳಿದು ಬೇರೆ ಮತಪಥಗಳಿಲ್ಲ ನಾಥ." ಇದನಾಲಿಸುತೆ ಕೊರಗಿನೊಳೆ ಹಿಗ್ಗಿದಾ ಹಿಮಾಂಶುಕುಲಸಂಭೂತಸಾರ್ವಭೌಮಂ ನಿಷಧೇಂದ್ರ ನಳನೃಪೋತ್ತಮಂ ತನ್ನಿನಿಯಳಂ ಸಾಧ್ವಿ ದಮಯಂತಿಯಂ ಪಿಡಿದೆತ್ತಿ ಮುದ್ದಿಸುತುಸಿರ್ದಂ ಗತಕಾಲಮಂ ನೆನೆದು ನೆನೆದು; "ದೇವಿ! ಸಮುದ್ರ ಮುದ್ರಿತ ಧರೆಯನುಂ ಏಕಸತ್ತೆಯೊಳಾಗಿಸುತೆ ಸಾರ್ವಭೌಮತೆಯಂ ಪಡೆದು ವೀರವೀರರ ಹಿರಿಯ ಪಟ್ಟಮಂ ಪಡೆದಿರ್ದೆ. ನನ್ನೈಸಿರಿಯ ಸಂಪದಕೆ ಕಳಶವಿಟ್ಟಂತೆ ನೀನೆನ್ನ ಕೈವಿಡಿದು ನನ್ನೆದೆಯನರಳಿಸಿದೆ; ನನ್ನರ ಮನೆಯ ಬೆಳಗಿಸಿದೆ; ಮತ್ತೆನ್ನ ವಂಶವನೆ ಕೊನರಿಸಿದೆ. ಆದೊಡಂ ಮಹಾ ಪಾಪಿಯಾದಾನುಂ ಮಂದಭಾಗ್ಯನುಮಾಗಿ ದ್ಯೂತಮುಖದಿಂ ದೇಶ ಕೋಶಂಗಳಂ ಪರಿವಾರಪ್ರಜೆಗಳಂ ಮೇಣ್ ಸರ್ವಸಂಪದಂಗಳಂ ಸೋತು ಪುಷ್ಕರಂಗಿತ್ತು ಕಳೆದು ಸೌಖ್ಯವಿತ್ತೆನ್ನ ಹಿರಿಯರಾಳಿದ ನೆಲನ ನುಳಿದು ಕೈವಿಡಿದ ನಿನ್ನನುಂ ಹೆಗ್ಗಾಡಿಗೆಳೆದು ತಂದು ನಿನ್ನ ಸೌಖ್ಯಮಂ

ಸೂರೆಗೊಂಡೆ. ನಿನ್ನೊಲುಮೆಯ ಬೇಡಿ ಹಂದರದಿ ನಿನಗಾಗಿ ಕೈನೀಡಿ ನಿಂದಿರ್ದ ದಿವೌಕಸರನುಳಿದು ಶಾಶ್ವತದ ಸುರಭೋಗಭಾಗ್ಯಮಂ ತೊರೆದು ನೀಂ ಹತಭಾಗ್ಯನಾದೆನ್ನನುಂ ಮೆಚ್ಚಿ ಮನವೊಲಿದು ಕೈಯಂ ಪಿಡಿಯೆ ಹೇ ಕಾಂತೆ, ನಾನಿತ್ತುದೇನಂತೆ? ಇದೋ ಬರಿದಾದ ಬಾಳಿನಾ ಕೊನೆಯಿರದ ಚಿಂತೆ" ಎಂಬನಿತರೊಳೆ ನಾಥನಂ ತಡೆದು ಕೊರಳ ಸೆರೆಹಿಗ್ಗುತಿರೆ ಗದ್ಗದಿತೆಯಾಗುತುಸಿರ್ದಳಾ ದಮಯಂತಿಯಿಂತು: "ಪ್ರಾಣೇಶ್ವರಾ, ಹಾಗೆನ್ನದಿರು ಪತಿದೇವ. ಈ ಸಿರಿಯಡಿಯ ಸೇವೆಗಾಗಿಯೇ ಸೆರಗಂ ಪಿಡಿದು, ನಿನ್ನರ್ಧಾಂಗಿಯಾದೆ. ಮರ್ತ್ಯರೆಲ್ಲರು ಸತ್ತು ಪಡೆವಾ ಸ್ವರ್ಗದೈಸಿರಿಯ ಸಂಪದವನೆಲ್ಲಮಂ ಪತಿಯ ಸಾನ್ನಿಧ್ಯದೊಳ್ ಪಡೆವ ದೃಢದಿಂದೆ ಬಂದೆ. ದಿಕ್ಪಾಲರೇಂ ಮರ್ತ್ಯಸುಖಕಾಶಿಸುತೆ ಬಂದಿರ್ದರೇ? ನಮ್ಮ ಚಿತ್ತವನರಿಯಲೈತಂದಿರ್ದವರು ಮೆಚ್ಚಿ ನಿನಗೆ ವರಗಳಂ ದಯಗೈದು ನಡೆದರಲ್ತೆ? ಭಕ್ತಿಭಾವದೊಳಂದು ನಾಂ ಭವನರಾಣಿಯಂ ಬೇಡಲ್ಕೆ ಸರ್ವಮಂಗಲೆಯಾ ಜಗನ್ಮಾತೆ ತಾಂ ಕರುಣದಿಂ ದಯೆಗೈಯ್ಯೆ ನಿನ್ನಂ ಪೊರ್ದಿಬಂದೆ. ನಿನ್ನ ಸೌಭಾಗ್ಯದೊಳ್ ಸಂತಸವನುಂಡು ವೈಭವದಿ ಪಾಲನೂ ಕೊಂಡು ಬಂದೊದಗಿದಾ ಕಷ್ಟದೊಳ್ ಭಾಗಿಯಪ್ಪುದೆ ಭಾಗ್ಯಮೆನಗೆ" ವ್ಯಥಿತಮಾನಸನಾ ನಳನೃಪಂ ದುಃಖಾಶ್ರುಕಣಗಳೊಂದೊಂದೆ ಸುರಿಯುತಿರೆ ತನ್ನಳಲ ಸಂತೈಸೆನ್ನುವಾ ತನ್ನಿನಿಯಳಂ ಬಿಗಿದಪ್ಪಿ ಕುರುಳನೇವರಿಸಿ ಮುದ್ದಿಸುತೆ ತಡೆತಡೆದು ನುಡಿದನಿಂತು:"ಕಾಂತೆ ಕೇಳ್ ನಿನ್ನಾಣತಿಯನಾಂತು ವಾರ್ಷ್ಣೇಯ ತಾಂ ಮಕ್ಕಳನ್ನೊಡಗೊಂಡು ನಡೆದಿರ್ಪನಲ್ತೆ? ಹಾಯ್! ಚೊಚ್ಚಲೊಳ್ ಕಂದನಂ ಪಡೆದಂದು ಪೊರ್ದಿದಾನಂದಮಂ ವರ್ಧಿಸಿತ್ತೆರಡನೆಯ ಬಸುರಿನಿಂದಿಳಿದ ನಂದನೆಯ ವದನಾರವಿಂದಂ. ಎಳೆತನದ ಮುದ್ದು ಮೊಗದೊಳ್ ಚೆಂದುಟಿಗಳರಳಿ ನಗೆಸೂಸಿ ಜೊಲ್ಲಜೇನ್ ಸುರಿವುದಂ ಕಾಣುತ್ತೆ ತೊದಲುಲಿಯ ಗೀತಮಂ ಕೇಳುತ್ತೆ ಪರ್ಯಾಯದಿಂ ಬಾಲರಾಡುವ ಬಾಲಕೇಳಿಯೊಳ್ ಮೆಯ್ಯಂ ಮರೆಯುತ್ತೆ ಸ್ವರ್ಗಸುಖಮಂ ಸೂರೆಗೊಂಡಿರ್ದವಂದು. ದಿನಗಳಂ ಕಳೆಕಳೆದು ತೇಜದೊಳ್ ಹೊಳೆಹೊಳೆದು ಬಾಲ್ಯದೊಳ್ ಬಳೆದು ಬರ್ಪಾ ಬಾಲರಂ ಕಂಡು ಸಂತಸದ ಸುಗ್ಗಿಯಲಿ ನಮ್ಮ ಸಾವನೂ ಮರೆದಿರ್ದವಂದು.

ನಮ್ಮೊಡೆಯ ಆಗಸವ ತುಂಬಿ ಬಂದಾ ರಾಕೇಂದುಬಿಂಬಂಗಳಂ ಕೂರ್ಮೆಯಿಂ ತಳ್ಕಿಸುವ ಭಾಗ್ಯಕ್ಕೆ ಬಾಹಿರಂ ನಾನಾದೆ ಕಾಂತೆ! ತಂದೆ ನಾನಾದೊಡೇಂ, ಒಡಲ ನೋವಂ ಲೆಕ್ಕಿಸದೆ ಎದೆಯ ನೆತ್ತರಂ ಬಸಿದು ನೀನೇ ಹಡೆದು ನಿನ್ನ ಬಸಿರಿನೊಳೆ ಬಳೆದಾ ಬಾಲರಂ ಬಾಹ್ಯಕ್ಕೆತಂದೆ. ಹೃದಯೇಶ್ವರೀ, ನಿನ್ನ ಭಾಗ್ಯಕ್ಕೆ ಪಡೆದ ಮಕ್ಕಳಂ ಅಕ್ಕರೆಯೊಳಾದರಿಸಿ ಒಂದಿನಿತು ತಿನಿಸುಣಿಸನೀವ ಸಂಪದವನುಂ ಕಳೆದೊಗೆದ ಕಡುಪಾಪಿ ನಾಂ. ನಿನ್ನಂ ಪಡೆದ ಪಿತನೆ ನೀಂ ಪಡೆದ ಬಾಲರಂ ಪೊರೆವ ತೆರನ್ನಾ..ತ್ತು ದೇವಿ. ಇದುವೆ ನೋಡಾ ಪ್ರಾರಬ್ಧ! ಯಾರ ಪಾಪಕೆ ಯಾರು ಹೊಣೆ?" ಎಂಬನಿತರೊಳೆ ಕಂಬನಿಯ ಸೂಸುತಾ ದಮಯಂತಿ ತಾಂ ಪತಿದೇವನಂ "ಪ್ರಾಣೇಶ್ವರ! ಚಿಂತಿಸುತೆ ಚಿತ್ತದೊಳೇನನೋ ಯೋಚಿಸುತೆ ಅಕಲ್ಪಿತವ ನುಡಿಯುದಿರ್. ನಿನ್ನನೇ ನೀನ್ ಹಳಿಯುದಿರ್. ಭುವನವಿಖ್ಯಾತವಾಗಿರ್ಪುದಾ ನಿನ್ನ ಘನತೆವೆತ್ತಿರ್ಪ ಚಂದ್ರವಂಶಂ. ಕಾಲವಶದಿಂದಿಂದು ದುಃಸ್ಥಿತಿಗೆ ಸಂದಿರ್ಪೆವಾದೊಡಂ ಮುಂಡೆ ಎಂದಾದರೊಂದು ದಿನ ಶುಭವುಂಟು ಕಾಂತ. ನೀನನ್ಯಥಾ ಭಾವಿಸದಿರೆ ನಿನ್ನರ್ಧಾಂಗಿಯಾದೆನ್ನ ಬಿನ್ನಪವನೊಂದನಾಲಿಸೀಗಲೆ ನಾಥ. ಸದ್ವಂಶಸಂಜಾತನಾದೆನ್ನ ಜನಕಂ ಉದಾರ ಚರಿತಂ. ಧರ್ಮದಿಂ ವಿದರ್ಭಮನ್ನಾಳುತ್ತೆ ಸಚ್ಛೀಲಸಂಪನ್ನನೆನಿಪ್ಪವಂ ಭೀಷ್ಮಕಂ ನೀನೊಪ್ಪಿದೊಡೆ ಬಾಲರಂ ಮೇಣ್ ನಮ್ಮಿರ್ವರಂ ಸುಖದೊಳೇ ಪೋಷಿಪಂ. ಅಲ್ಲಿ ಕಳೆಯುಲಪ್ಪುದು ನಮ್ಮ ಕಷ್ಟಮುಂ". ಪೇಳ್ದೆಲ್ಲ ಮಾತುಗಳನೊಲ್ದಾಲಿಸುತೆ ಕೇಳ್ದಾ ಭೂವರಂ ಮರುಗಿದಂ ಭಾವಿಸುತೆ ಭಾರ್ಯೆಯುಂ ಮೇಣವಳ ವಾಣಿಯುಂ. ಬಂದೆಡರ ದುಃಖದುದ್ವೇಗದೊಳೆ ಮುಳುಗಿರ್ದೊಡಂ ಮನ್ನೆತನದ ಘನತೆಯೊಳ್ ಪಳಗಿರ್ದ ನರೋತ್ತಮಂ ನೀರೆಯಂ ಕುರಿತೆಂದ "ನೆಲೆಕಾಂತೆ, ನೀನೊರೆದ ತೆರದಿಂದ ಭೀಷ್ಮಕನ ಪುರದೊಳಿರೆ ತೊರೆಯುಲಪ್ಪುದೆ ಪೇಳ್ ನನ್ನ ದೀನತೆಯು ಮೇಣ್ ಪರಾಧೀನತೆಯು? ದುಃಖದೊಳೆ ಶಾಂತಿಯುಂ ಪಡೆದಪರ್ ನಿನ್ನಂ ಪೆತ್ತು ಪಡೆದವರ್. ಪರಿತೋಷಗೊಂಡಪರ್ ನಾಲ್ ದಿನಂ ಪರಿವಾರ ಪ್ರಜೆಗಳುಂ ಅರಮನೆಯ ಸ್ವಜನರುಂ. ಆದೊಡೇಂ ಜನಮನದ ಭಾವನೆಗೆ ಬೆಲೆಬಾರದೇ? ಪೊಡವಿಯೊಡೆಯಂ ತನ್ನೊಡಲನೊಂಡಂ ಪೊರೆಯುಲಾರದೆ ಮಡದಿ ಮಕ್ಕಳ

ಗೊಂಡು ಬಂಧುಗೃಹವುಂ ಸೇರ್ದನೆಂದಾಡರೇ? ಬಗೆಬಗೆಯ ಜನರೊರೆದಪರ್ ತಂತಮ್ಮ ಮನಬಂದ ತೆರದಿಂದಲಿ ಸ್ವಾಭಿಮಾನವಂ ಸವೆಯಿಸುತೆ. ಅನಿತೆಲ್ಲಮುಂ ಕೇಳಲಾರ್ಪೆವೆ ನಾವು ಪ್ರಿಯತಮೆ! ಸಡಗರದೊಳಡಿಗಡಿಗೆ ಬಾಂಧವರೆ ನಮ್ಮ ದುರ್ದಶೆಯ ಕುರಿತಾಡುವರ್. ಕೀಳ್ತನದೊಳೆನ್ನಿರವ ನೇಡಿಪರ್. ವ್ಯಂಗ್ಯದಿಂ ಅಸ್ಪಷ್ಟದಿಂ ಮೇಣ್ ಔದ್ಧತ್ಯದಿಂ ನುಡಿದು ನುಡಿಸುವಾ ಮಾತುಗಳ ಕೇಳುತ್ತೆ ಮತ್ತದರ ಬೇಗೆಯೊಳೆ ಬೇಯುತ್ತೆ ನಡೆವೆಣನ ತೆರದಿಂದೆ ಬಾಳ್ವುದವುಂ ನೀನೆಂತು ಕಾಂಬೆ ಕಾಂತೆ? ಅಕ್ಕರೆಯೊಳಾದರಿಸಿ ಭೀಷ್ಮಕಂ ಪೊರೆದೊಡೇಂ,ನಿನ್ನೆಡೆಯೊಳೆನ್ನಂ ಕಂಡೊಡನೆ ನಳನಿವಂ ತಕ್ಕನಲ್ಲಂ ನಿನಗೆನುತೆ ಮೂಗುಮುರಿದಾಡುವಾ ನಾರಿಯರ ಕಿರುಮಾತಿನಿರಿತವುಂ ತಾಳುತ್ತೆ ನೀನೆಂತು ಬಾಳ್ವುದರಸಿ? ಎಂತಾದೊಡಂ ನಿನ್ನಂವೆರಸಿ ನಾನಿರ್ದೊಡಲ್ಲಿ ನಿನಗೆ ಸೊಗಮಿಲ್ಲಮೆ"ಂಬಾಮಾತಿಗುರೆ ನೊಂದ ದಮಯಂತಿ ತಾಂ ಪ್ರಾಣೇಶ್ವರನ ಪಾದಕೆರಗುತೆ ಬೇಡಿದಳ್ "ತನ್ನಕಾವುದೆ"ಂದು. ಕಾಲ್ಗೆರಗಿದರ್ಧಾಂಗಿಯುಂ ಪಿಡಿದೆತ್ತಿ ಬೋಳೈಸಿ ಕೆನ್ನೆಯುಂ ಸವರುತ್ತೆ ತೊಯ್ದ ಮುಂಗುರುಳ ಸರಿಸುತ್ತೆ ಕಣ್ಣೀರನೊರಸುತ್ತೆ ಮರುಗುವಂ ಮತ್ತಿರದೆ ಕೊರಗುವಂ ಧರಣೀಶನು. ರಾಜರಾಜ್ಞಿಯರಿರ್ವರುಂ ಮರುಗುತಂ ಮತ್ತೆ ಸಂತೈಸುತೊರ್ವರೊರ್ವರಂ ಶೋಕಸಾಮ್ರಾಜ್ಯದಾ ರಾಯರಾಣಿಯರಾಗಿ ಮತ್ತದನೇ ಆಳುತಂ ಅದರೊಳೇ ಬೀಳುತಂ ಕುಳಿತ ಕಲ್ಲೊಳೇ ಬೀಳುತೊರಗಿದರ್, ಪೂರೈಸಿದಾ ಪುಣ್ಯಫಲದಿಂ ಜಾರುತಿಳೆಗುರುಳ್ದಾ ತಾರೆಗಳ ತೆರದಿ.

ತನ್ನಾಳ್ವಿಕೆಯ ಅಳ್ಕರೆಯನಾಡಿ ನಿಂದಳಲ ಹೊರೆಯುಂ ಹೊತ್ತು ಅಳುತಳುತೆ ಕಾಡಿಗೈತಂದ ಬಳಲ್ಕೆಯಿಂ ಬೇಯುತ್ತೆ ಉಟ್ಟ ಬಟ್ಟೆಯೊಳೆ ಮೇಣ್ ಹಸಿದ ಹೊಟ್ಟೆಯೊಳೆ ವಿಧಿವಶದಿ ನಟ್ಟಡವಿಯೊಳ್ ಕಲ್ಲಮೇಲೊರಗಿ ಮಲಗಿರ್ದೊಡಂ ಜಗದ ಜೀವರನೆಲ್ಲ ತೋಳ ತೆಕ್ಕೆಯೊಳಾನಿಸುತೆ ಸುಖದ ಶಾಂತಿಯಾ ಮುದ್ರೆಯನೊತ್ತಿ ಸಾಮ್ರಾಜ್ಯವಾಳುತಿಹ ನಿದ್ರಾಂಗನೆಯು ತಾಂ ಬಳಿಸಾರ್ದು ಬಂದಪಳೆ? ನುಡಿದು ನುಡಿಸುತ್ತಡಿಗಡಿಗೆ ಹೃದಯತಂತ್ರಿಯುಂ ಮಿಡಿದೇಳ್ವ ನಾದದೊಲ್ ನಿಟ್ಟುಸಿರು ಸೂಸುತಿರೆ ಪತಿಪತ್ನಿಯರ್, ಸರಿಯುತಿರ್ದುದು ರಾತ್ರಿ; ನುಡಿಯಲಾರದೆ ಮುಂದೆ

ಶೋಕಭಾರದೊಳಿರಲ್ ಬಿಗಿದ ಮೌನದೊಳಿರುಳು ಸಾಗುತಿರ್ದುದು ಮುಂದೆ ಮುಂದೆ.

ಸಾಮ್ರಾಜ್ಯಸಂಪದಂಗಳಳಿದರೇನ್, ಉಳಿದರೇನ್, ಸುಖದುಃಖಂಗಳೇನ್, ಪಾಪಪುಣ್ಯಗಳೇನ್, ಮಾನವರು ತಂತಮ್ಮ ಕರ್ಮಂಗಳಿಂದೇನಾದರೇನು? ಉರುಳುತಿರ್ದುದು ಕಾಲಂ ನಿಯತಿನಿಯಮಂಗಳಿಂದೆ. ಸತ್ಯಮೀ ಪ್ರಕೃತಿ ತಾಂ ರಮ್ಯಮಂತೆಯೆ ರೌದ್ರಂ.

ಉರುಳುತಿರೆ ಕೊನೆಯ ಜಾವದೊಳಿರುಳು ಬೀಸತೊಡಗಿತು ಗಾಳಿ ತಂಪಿಂದೆ. ವಿಂಧ್ಯಾದ್ರಿಶಿಖರದಿಂ ನಿಮ್ನಾಂತರಕೆ ಹರಿದು ಮರದೆಲೆಯ ಮರ್ಮರಂಗಳಿಂ ಕಿಲಕಿಲನೆ ನಗುತಲಿರ್ದುದು ಕಾಡು ನಳನಿರವ ನೋಡಿ. ಧ್ವನಿಗೂಡಿ ವಿಕಟರವದಿಂ ತೊನೆಯುತಿರ್ದುದು ತಲೆಯ, ಬೆಳೆದಿರ್ದ ಬಿದಿರ ಹಿಂಡು. ವಿಷಮ ಗಂಭೀರತೆಯೊಳಿಂತುಟಾ ಕಾರಡವಿ ಮೈಮರೆದಿರಲ್ ದಮಯಂತಿಗುಂ ಬಳಲ್ಕೆಯಿಂ ಹನಿಗೂಡಿದಾ ಕಣ್ಣಿನೆವೆಭಾರದಿಂ ತೂಕಡಿಸಿ ತಾನರಿಯದೇ ಜೊಂಪುಹತ್ತಿರ್ದುದು; ಕ್ಷಣಕ್ಷಣಂ ಸರಿಯುತಿರ್ದುದು ಮುಂದೆ ಸಾಗರವ ಸೇರುತಿಹ ಕಿರುತೊರೆಯ, ತೆರದಿಂದೆ ಕಾಲಂಗೆ ಕಾಣ್ಕೆಯಾಗಿ. ಕಣ್ಣಿನೆವೆ ಮುಚ್ಚಿರ್ದೊಡೇಂ ಬಿಚ್ಚಿರ್ದೊಡೇಂ ಕವಿದ ಕತ್ತಲೆಯೊಳಾವುದಂ ಕಾಣದಿರ್ದಾನಳಂ ಕಂಡನಾಗಳೆ ನೀರೆಯಾ ನಿದ್ರಿತಪರಿಸ್ಥಿತಿಯ ಮಂದಗತಿಯೊಳ್ ಸಾಗುತಿರ್ದಾ ಶ್ವಾಸನಿಸ್ವನದಿಂದೆ.

ಮದಗಜಂ ಕಿತ್ತೆಸದ ಕಮಲದೊಲ್ ಮಲಗಿರ್ದ ದಮಯಂತಿ ತಾಂ ಕಾಣುತೇನನೋ ಕನಸಿನೊಳ್ ಚೀರಿದಳ್, ಭೀತಿಗೊಂಡಾಕ್ಷಣದಿ. ನೃಪೋತ್ತಮಂ ಮೈದಡವಿ ಸಂತೈಸುತ್ತೇನೆಂದು ಬೆಸಗೊಳಲ್ ತರಳೆಯಾಡಿದಳಿಂತು ಭವಿಸಿರ್ದ ರುದ್ರಮಯ ಸ್ವಪ್ನಮಂ: "ಪ್ರಾಣೇಶ್ವರ, ನಾನರಿಯದೇ ಬಂದಡಸಿರ್ದ ನಿದ್ರೆಯೊಳ್ ಕನಸೊಂದ ಕಂಡಂಜಿದೆಂ. ನಿರ್ಜನಾರಣ್ಯದೊಳ್ ನಾವಿರ್ವರುಂ ಸಂಚರಿಸುತಿರೆ ಸುಳಿಗಾಳಿಯೊಂದೆನ್ನ ಹಾರಿಸಿತ್ತಡವಿಯೊಳ್ ಬಿಲವೊಂದರೆಡೆಗೆ. ಬಳಿಯ ಬಿಲದೆಡೆಯೊಳಿರ್ದೊಂದು ಪೆರ್ಬಾವು ತಿನ್ನಲೆಂದೆನ್ನನಟ್ಟಿರಲ್ ಪಾಯ್ದೋಡುತಿರ್ದೆನ್ನನುಂ ಕುಟ್ಟಿಕೆಡಹಲ್ ಬಂದಿರ್ದೊಂದು ಮತ್ತೇಭವಂ ಕಾಣುತ್ತೆ ಪ್ರಾಣಭಯದಿಂ

ಚೀರ್ದೆನಯ್ಯೋ! ಎಂದು. ಕಂಡೆನೇತಕೋ ಕನಸ? ಪತಿದೇವ ನನ್ನೆದೆಯೊಳಿನ್ನುಂ ಚಿಗುರುತಿರ್ಪುದು ಭೀತಿ. ಮುಂದೇನು ಕಾದಿರ್ಪುದೋ ಪೇಳೆನ್ನ ನಾಥ, ಪೇಳೆ"ನಲ್ ಭೂಭುಜಂ ತಾಂ ಶಾಂತತ್ವದಿಂ ತನ್ನ ಸತಿಯುಂ ಸಾಂತ್ವನಂ ಗೊಳಿಸುತಿರೆ ಪ್ರಶಾಂತವಾತಂ ಮಂದಗತಿಯಿಂ ಸೆಳೆಯುತಿರ್ದುದು ರಾತ್ರಿಯುಂ ಉದಯಾದ್ರಿಯೆಡೆಗೆ.

ಮರಮರಂಗಳ ಪೊಟರೆಯೊಳ್ ಪವಡಿಸಿರ್ದನಿತೆನಿತೋ ಪಕ್ಷಿಗಳ್ ಗರಿಗಳಂ ಕೊಡಹುತ್ತೆ ಮೇಲೆಳ್ದು ಕೊಂಬೆಗಳನಾಶ್ರಯಿಸಿ ಸಾರುತಿರ್ದುವು ಪ್ರಭಾತಗೀತಮಂ. ಖಗತತಿಯ ಸುಸ್ವರದ ರಾಗಕ್ಕೆ ತಾಳಮಂ ಮೇಳೈಸ ತೊಡಗಿದವು ಪೊದರೆಡೆಯ ಮೊಲಮಿಗಂಗಳ್. ನೆಗೆದು ಹಲ್ಕಿರಿದು ಹಾರುತರಚುವಾ ಕೋತಿಗಳ ಕೈವಾಡದಿಂ ಬಗ್ಗಿವಂದಿಸುತಿರ್ದುವಾ ರೆಂಬೆಗಳ್ ಭೂಮಿಯುಂ. ಆಕಳಿಸುತಟ್ಟಹಾಸದಿಂ ಪಿರಿಯ ಜಂತುಗಳ್ ಬಾಯ್ಬಿಡಲ್ ಕಿರುದನಿಯುಂ ಅದರೊಳೇ ಲೀನವಾದಂತೆ ಕಾಣದಾದುವು. ಬನದ ಮೇಲಿನ ಬಾನಿನೊಳ್ ತೈಲವಾರಿದ ದೀಪದೊಲ್ ಮಿನುಗುತಿರ್ದುವು ಚುಕ್ಕಿಗಳ್. ತರತರದ ಕುಸುಮ ಸೌರಭದಿಂದೆ ಪರಿಮಳಿಸೆ ವನಶ್ರೀಯ ವದನಾರವಿಂದಂ ಪೂರ್ವದಿಶೆ ಕೆಂಪಡರ್ದಾಗಸದ ಗವಿಯಿಂದೆ ಕತ್ತಲೆಯ ಮುಸುಕ ತೆಗೆದೊಗೆದು ಮೇಲೆದ್ದು ಬಂದನಂಬರದೊಳಂಬುಜಾಪ್ತಂ. ಲೋಕನೇತ್ರಂ ಕೋವೆಯೊಳ್ಕಾಯಿಸಿದ ಚೆಂಬೊನ್ನಿನೊಲ್ ಥಳಥಳನೆ ಹೊಳೆಯುತಟ್ಟಿದಂ ದಿನಕರಂ ಧಾತ್ರಿಯಾಂ ಮುತ್ತಿಡುವ ಬಣ್ಣಬಣ್ಣದ ಸಹಸ್ರಾರು ಕಿರಣಂಗಳಂ. ದೇಶಾಂತರಕೆ ನಡೆದಿರ್ದ ಪತಿದೇವನೈತರಲ್ ಮಡದಿ ತಾಂ ಪಡೆದ ಮಕ್ಕಳಂ ಪಿಡಿದೆತ್ತಿ ನಿಂದವೊಲ್ ರಂಜಿಸುತ್ತಿರೆ ಪ್ರಕೃತಿ ತಾಂ ವಲ್ಲಭಂ ನೇಹದೊಳ್ ಕಂಡುಲ್ಲಸದಿ ವೈದಡವಿ ತಳ್ಕಿಸುವ ತೆರದಿಂದೆ ಮುದ್ದಿಪಂ ತಪನ ತಾಂ ತನ್ನ ಕೈಕದಿರ ಕೋಟಿಯಿಂದೆ. ಮರದೆಲೆಯ ಮರೆಯಿಂದೆ ತೂರಿಬಹ ರವಿರಶ್ಮಿಯಿಂ ರಮ್ಯತೆಯ ನಾಂತಿರ್ದುದಾ ಕಾನನಂ. ಅನಿತರೊಳ್ ಸತಿಸಹಿತ ಬಂಡೆಯನ್ನಿಳಿದು ಬಂದಾ ನರೋತ್ತಮಂ ಝರಿಯ ನೀರಿನೊಳ್ ಮೊಗದೊಳೆದು ಗಗನಾಂಗಣದಿ ಮೇಲೇರಿ ಬಹ ಕರ್ಮಸಾಕ್ಷಿಯುಂ ಕುರಿತರ್ಘ್ಯಮನ್ನಿತ್ತು ನೀರ್ಕುಡಿದು ಮಾಗಿ ಬಿದ್ದಿ

ದ್ರ್ಭಾವುವೋ ಪಣ್ಗಳಂ ಮೆದ್ದು ಮುಂದೆದ್ದು ನಡೆದಂ ಮಡದಿಯನ್ನೊಡ ಗೊಂಡು ಪಯಣಗತಿಯೊಳ್ ಪಾಂಥನಾಗಿ. ಕಾಲ್ನಡೆಯೊಳಾವಗಂ ನಡೆಯು ದಿರ್ದಾ ದಂಪತಿಗಳಿರ್ವರುಂ ಕಲ್ಲುಗಳನೆಡಹುತ್ತೆ ಮುಳ್ಳುಗಳ ಮೆಟ್ಟುತ್ತೆ ಪದಪಲ್ಲವಂಗನ್ನೆಳೆದೆಳೆದು ನಡೆದರೆನಿತೋ ದೂರಮಂ ಸೀಳ್ದಾರಿಯೊಂದಂ ಪಿಡಿದು. ಮುಂದೆ ಹಳ್ಳಕೊಳ್ಳಂಗಳಂ ದಾಂಟುತ್ತೆ ಹರಿವ ರಕುತದ ಧಾರೆ ಯೊಳ್ ಪಾದಂಗಳಂ ತೋಯಿಸುತೆ ಮೇಣ್ ಹೊಸಬರಿಕ್ಕಿದ ಹಾದಿ ಯೊಳ್ ಹಳಬರ್ಕೈತಂದ ತೆರದಿಂದ ವಿಧಿಯು ◦ಕತ್ಕಾರದಿಂ ಹೇರಿರ್ದ ಭಾರದೊಳ್ ಕೊರಳಂ ಬಗ್ಗಿಸುತೆ ನಡೆದರ್ ಭವದ ಬಂಡಿಯನ್ನೆಳೆಯೆ ಬಿಗಿದಿರ್ದ ಹಯಂಗಳಾಗಿ.

ಪೃಥ್ವೀಪಾಲಕನಿಂತಡವಿಯೊಳ್ ಎಡೆಬಿಡದೆ ತನ್ನೊಡನೆ ನಡೆತರ್ಪ ಮಡದಿಯನ್ನೊಡಗೊಂಡು ನಡೆನಡೆದು ಕಂಡಂ ಮುಂದೆ, ಬಡತನದಿ ಕಡಲ ಕಡೆಗೋಡುವಾ ಗಿರಿರಾಜಕನ್ಯೆಯಂ ಪುಣ್ಯಜಲಪರಿಪೂರ್ಣೆಯಂ ಪಯೋಷ್ಣಿಯಂ. ಸೊರಗಿರ್ದ ಮಾನವರ ಮೈಯ್ಯೊಳೆಲುವೆದ್ದು ಕಾಂಬ ತೆರದಿಂದೆ ತೋರುತಿರ್ದುವು ಹಿರಿಕಿರಿಯ ಬಂಡೆಗಳ್ ನದಿಯ ವಕ್ಷ ದೊಳಲ್ಲಿ ನೀರಾರಿದೆಡೆಗಳಲ್ಲಿ.

ಇಕ್ಕೆಡೆಯ ದಂಡೆಗಳ ಮಧ್ಯೇ ಬಿದ್ದಿರ್ದ ಮಳಲ ರಾಶಿಯೊಳ್ ತಡೆತಡೆದು ಆ ಬಳಿಯೆ ಬೆಳೆದಿರ್ದ ಪೊದೆಗಿಡಂಗಳಂ ಬಳಸುತ್ತೆ ತಗ್ಗ ನೊಳ್ ನಿಲ್ಲುತ್ತೆ ಪರಿಯುತಿರ್ದುದು ನದಿಯು ನಳನ ದಮಯಂತಿಯಂ ಪೋಲ್ದು. ಸೆರಳುಹಾಕದ ಕುರುಳುಗಳ್ ಕುಳಿಬಿದ್ದ ಕೆನ್ನೆಗಳ್ ಒಳ ಗೊಳಗೆ ಸೇರಿರ್ದ ಕಂಣುಗಳ್ ಮೇಣ್ ತೊಟ್ಟಿಕ್ಕುವಾ ಕಂಣೀರ ಹನಿ ಗಳ್ ಇಂತೆಸವ ತನ್ನ ಸತಿಯಂ ಮತ್ತಮಾನದಿಯಂ ದಿಟ್ಟಿಸಿದ ನರೋ ತ್ತಮಂ ಮರುಗುತ್ತೆ ಸುರಿಸಿದಂ ನಯನವಾರಿಯಂ ಸೃಷ್ಟಿಸಿದನಿನ್ನೊಂದು ಪಯೋಷ್ಣಿಯಂ ತಾನೆನೆ.

ಬಾಷ್ಪಲೋಚನನಾ ನಳನೃಪಂ ನದಿಯ ತೀರದೊಳಡಿಯಿಟ್ಟು ತುಸುದೂರ ಮುಂದ್ಯೆದಿ ಕೆಳಗಿಳಿದು ತನ್ನ ಮಡದಿಯಂ ನೀರಿನೊಳ್ ಕೈಪಿಡಿದು ದಾಂಟಿಸುತೆ ನಡೆದು ಸಾರ್ದಂ ಪೂರ್ವದಿಂದಪರತಟಿಯಂ ನದಿಯನುತ್ತರಿಸಿದಾಕ್ಷಣವೆ ದೃಷ್ಟಿಗೋಚರಮಾಯ್ತೊಂದು ಕಾಲ್ದಾರಿ

ದಕ್ಷಿಣೋತ್ತರವಾಗಿ. ಕಾಣುತದನಾ ನೃಪವರೇಣ್ಯಂ ಮನದೊಳೇನನೋ ಯೋಚಿಸುತೆ ನಿಂದನಲ್ಲಿಯೆ ಮೌನದೊಳ್ ಬಗೆಯೊಳೇ ಬಾಹ್ಯಮಂ ಮರೆದ ತೆರದಿ. ನೋಳ್ಪನಡಿಗಡಿಗೆ ಭುವನಗಗನಂಗಳಂ ನೆಟ್ಟದಿಟ್ಟಿಯೊಳಲ್ಲಿ ದಿಕ್ಕುದೆಸೆಯೆಲ್ಲಮಂ. ಕಂಡನೇನನೊ ಚಿತ್ತದೊಳ್; ಮಡದಿಯುಂ ಕರೆದೆಂದ "ನೆಲೆಕಾಂತೆ ಕಂಡೆಯಾ ವಿಧಿಯ ಮಾಜಾ೯ಲದಾಟಮಂ? ಇನ್ನೆನಿತು ದಿನಮೀ ಬರಿಯ ಪರಿಭ್ರಮಣೆ? ಮತ್ತೆಲ್ಲಿ ನಮ್ಮಿರಕ್ಕೆ ನೆಲೆ? ವನದೊಳೇ? ವನ್ಯಜಂತುಗಳೆಡೆಯೊಳೇ? ಕಾಲಮಂ ಕಳೆಯಲಾಪೆವೆ ಪೇಳು. ಹಸಿವನೆಂತಾವು ಹಿಂಗಿಪೆವು? ಮೇಣೆಲ್ಲಿ ಮಲಗಿ ನಿದ್ರಿಪೆವು? ಸಾಮ್ರಾಜ್ಯಮಂ ಕಟ್ಟಿ ಅದನಾಳಿ ಬಾಳಿರ್ದೆಮಗೆ ಹಿಡಿಕೂಳಿಗುಂ ಗತಿಯಿಲ್ಲ; ಮುದುಡಿ ಮಲಗಲೂ ತಾವಿಲ್ಲ; ಕಾಲಗತಿಯಿದು ಕಾಂತೆ. ನೋಡದೋ ತೆಂಕಣಿಗೆ ಮುಖಮಾಡಿ ನಡೆಯಲ್ಕೆ ಭೀಷ್ಮಕನ ಕುಂಡಿನಾಪುರಂ ಉತ್ತರಕೆ ಕೋಸಲಂ ಹೃದಯೇಶ್ವರೀ; ಒಂದೇ ಮನೆಯೊಳೊಂದಾದ ಹೃದಯಂಗಳಿಂ ಸಂದರಿಯದಾ ಬಾಳಂ ಬಾಳಿರ್ದೆವೆಂದು. ಇಂದಿದೋ ಲಬ್ಧಮಾಗಿರ್ಪುದೀ ಪ್ರಾರಬ್ಧಂ. ಮುಂದೆ ಇನ್ನೆಂದಿಗೋ ಆ ಸಿರಿಯ ಭಾಗ್ಯಂ? ಪ್ರಿಯತಮೆ! ದೇಶದೇಶಾಂತರಕೆ ನಡೆದಾನು ಪರರಾಜರೂಳಿಗಮ ಕೈಕೊಂಡು ದಿನಗಳೆದು ಮುಂದೆ ಎಂದಾದರೊಂದು ದಿನ ಬಂದು ನಿನ್ನಂ ಕೂಡಿ ಬಾಳ್ವೆಂ. ನಡೆ ನೀನು ನಿನ್ನ ಜನಕನಂ ಸೇರಿ ಸುಖದೊಳಿರು" ಕೇಳುತದನೆಲ್ಲಮಂ ದಮಯಂತಿ ತಾಂ ಕುಸಿದುಬಿದ್ದಳು ಪತಿಯ ಪಾದದೊಳ್; ರೋದಿಸುತೆ ನುಡಿದಳಿಂತು "ಆಡದಿರು ಮರ್ಮಭೇದಕವಾದ ಮಾತುಗಳ ನಾಥ, ನೀನೆನ್ನ ಸರ್ವಸ್ವ, ಪತಿದೇವ; ಸತಿಯು ನಾಂ ನಿನ್ನರ್ಧಾಂಗಿ; ಪತಿಪಾದಮೂಲವೇ ಶರಣೆಂದು ನಂಬಿದೆನು. ಹುಟ್ಟಿದಾ ಮನೆಯ ಹಂಗಂ ಹರಿದೊಗೆದು ಮೆಚ್ಚಿ ಮನವೊಲಿದು ನೆಚ್ಚಿ ನಾಂ ಸೇರಿರ್ದ ಚರಣಂಗಳಂ ಬಿಡಲಾರೆ ನಾಥ. ನೀನುಮಂತೆಯೆ ಕೈಬಿಡದಿರೆನ್ನಂ. ನೀನೆಲ್ಲಿರ್ದೊಡಲ್ಲಿ ನಾನಿರ್ದು ನೀಂ ನಡೆವ ಮಾರ್ಗದೊಳಿರ್ಪ ಮುಳ್ಳುಗಳನೆತ್ತಿ ಕಳೆಯುತ್ತೆ ನಿನ್ನೊಡನೆಯೇ ನಡೆವುದೆನ್ನ ಧರ್ಮಂ. ಭಾಗ್ಯವಿದ್ದಾಗ ಕೈಕಾಲ್ಗೆ ಜನರಿಹರು; ಅದನುಳಿಯೆ ಭಾರ್ಯೆಯಲ್ಲದೆ ಬೇರಾರು ಬಹರು? ಜೀವಜೀವಕೆ ಹೊಣೆಯ ತೆತ್ತಂದು ಹೆಂದರದಿ ಹವ್ಯವಾಹನನ ಸಾಕ್ಷಿಯೊಳ್ ಪತಿಪತ್ನಿ

ಯರ್ ನಾವಾಗಿ ದಾಂಪತ್ಯಬಂಧನದಿ ಬಿಗಿವಡೆದು ಬಂದಿಹೆವು ಕಾಯ ಛಾಯೆಗಳಂತೆ. ಕಾಂತ ಹೊನ್ನಕಡಗವು ಬೇಡ, ರನ್ನದೋಲೆಯು ಬೇಡ, ಮುತ್ತಿನಾ ಕೊರಳಹಾರವು ಬೇಡ, ಅರಮನೆಯ ಸುಖಬೇಡ, ಸಿರಿಬೇಡ, ಮಿಷ್ಟಾನ್ನದೂಟವೂ ಬೇಡ, ತಂದೆತಾಯ್ಗಳು ಬೇಡ, ಮುದ್ದು ಮಕ್ಕಳು ಬೇಡ, ಎನಗೆನ್ನ ಬಂಧುಗಳುಂ ಬೇಡ. ಬೇಡುತಿಹೆನಾಂ ನಿನ್ನ, ಪ್ರಾಣೇಶ್ವರ, ನೀಡೆನಗೆ ಕಾರುಣ್ಯದಿಂ ನಿನ್ನಡಿಯನನವರತ ಪೂಜೆಗಾಗಿ" ಇಂತು ಸುರಿಸುರಿಸಿದಾ ಕಣ್ಣೀರಿನೊಳೆ ಕಾಂತನಾ ಚಿತ್ತಮಂ ತೇಲಿಸುತೆ ಬಿಡಲಾರದಾ ಪತಿಯ ಪಾದಗಳಂ ಪಿಡಿದಪಳೊಳೇ ತನ್ನ ಹಣೆಯುಂ ಚಾಚಿ ಮರುಗುತಿರ್ದಾ ಮಡದಿಯುಂ ಪಿಡಿದೆತ್ತುತಾದರಿಸಿ ಭೂಪಾಲಕಂ ಸತಿಯನಾಲಿಂಗಿಸುತೆ ಮತ್ತವಳ ಮುಖದ ಮೇಲಿರ್ದ ತೊಯ್ದಧೂಳಂ ಕೊಡಹುತ್ತೆ ತಿಲಕಮಂ ತಿದ್ದುತ್ತೆ ಚೆನ್ನಮೇಲ್ ಕೈಯ್ಯಾಡಿಸುತೆ ಮುದ್ದಿಸುತೆ ಕಣ್ಣೀರನೊರಸಿದಂ ಮೇಣವಳ ಹೃದಯಮಂ ತಣಿಸಿದಂ.

ಇಂತಾಗಲಾಗಸದ ರವಿ ತಾನು ನಡುವಗಲಿನಕ್ಷಮಂ ಸೇರ್ದುದನ್ನರಿತಾಗಲಿರ್ವರುಂ ಮಜ್ಜನಕೆ ಮನವಮಾಡಿ ತಿರುಗಿದರ್ ತಾವ್ ದಾಂಟಿ ಬಂದಿರ್ದ ಪಯೋಷ್ಣಿಯೆಡೆಗೆ. ಹೊಳೆಗಿಳಿದು ನೆಳಲಿನೊಳ್ ಮಳಲ ರಾಶಿಯ ಮೇಲೆ ನಳನೃಪಂ ಮಂಡಿಸಿರ್ದನ್ನೆಗಂ ದಮಯಂತಿ ತಾಂ ನೀರ್ಗಿಳಿದು ಮಿಂದು ಸುತ್ತಿರ್ದ ಸೀರೆಯೊಂದರ ತುದಿಯಂ ಹಿಂಡುತಾರಿಸುತೆ ಆರಿದಾ ತುದಿಯನೇ ಸುತ್ತುತುಳಿದಾ ತುದಿಯನಾರಿಸುತೆ ತನ್ನ ಸ್ನಾನ ಕರ್ಮಮಂ ಪೂರೈಸಿದಳ್.

ಸಚ್ಛೀಲೆ ದಮಯಂತಿ ತಾನಿಂತು ಮೀಯುತಿರೆ ನೋಡುತಿರ್ದಂ ನಳಂ ಮಹಾರಾಣಿ ಮೀವಂದಮಂ; ಅದಕಾಗಿ ಪಡುತಿರ್ದ ಬನ್ನಮಂ. ಹರಿಯುತ್ತಿದ್ದುದು ಚಿತ್ತವರಮನೆಗೆ ಮೇಣಲ್ಲಿನಾ ಮಜ್ಜನಗೃಹಕೆ ಹೋಲಿಸುತಲದರನೀ ದುಃಸ್ಥಿತಿಗೆ. ನೋಡಲಾರದೆ ದುರ್ದಶೆಯ ದೃಶ್ಯಮಂ ಕರಗಿತಾ ಭೂವರನ ಹೃದಯಂ. ಕಣ್ಣಾಲಿ ತಿರುಗಿಸುತೆ ಕತ್ತೆತ್ತಿ ನೋಡಿದಂ ವ್ಯೋಮಮಂ. ನೋಡದಾದಂ; ಮೇಲೆ ಉರಿವ ಕೊಳ್ಳಿಯೊಳಿರಿವ ತೆರನಾಯ್ತು ಬಾಂದಳದ ರವಿಯ ಕಿರಣಂ. ವದನಮಂ ತಗ್ಗಿಸುತೆ ನೋಡಿದಂ ಭೂಮಿಯಂ; ಭಾರವಾದುದು ಶಿರಂ; ತಾಳಲಾರದೆ ನಳಂ ಮೊಣಕಾಲ

ನೆತ್ತಿ ಜೋಡಿಸುತೆ ಬಾಹುಬಂಧದೊಳಾನಿಸುತೆ ಹೇರಿದಂ ಭಾರದಾ ಶಿರವ
ನದರ ಮೇಲೆ, ದುಃಖಾಗ್ನಿಯಿಂದೊಡಲು ಬೇಯುತಿರೆ ಸುರಿಸುತಿರ್ದಂ
ಕಣ್ಣೀರ ಧಾರೆಯಂ. ಮಾತಿಲ್ಲದೆಯೆ ಮೌನದೊಳ್ ಮನಕರಗಿ ಮೈಮ
ರೆತು ಮರುಗುವಾ ತನ್ನಿನಿಯನಂ ಕೈಕಾಲ್ ಮುಖಗಳೆಲ್ಲವಂ ಮುದು
ಡಿಸುತೆ ಬೆನ್ನಂ ಬಾಗಿಸುತೆ ತಲೆಯಂ ತಗ್ಗಿಸುತೆ ದೀನತೆಯ ಸಂಕುಚಿತ
ತ್ವಮಂ ತಳೆದಿರ್ದ ವಿಶಾಲಹೃದಯನಂ ಕಾಣುತೋಡುತೆ ಬಂದು ಮೈದ
ಡವುತೆಚ್ಚರಿಸಿ ಸೆರಗಿನಿಂಬರಂ ಬೀಸಿ ದಮಯಂತಿ ತಾಂ ಬೇಡಿದಳ್
ಮಜ್ಜನಕೆ ಪತಿದೇವನಂ. ಮರುಮಾತನೇನನುಂ ನುಡಿಯದಾ ನೃಪೋ
ತ್ತಮಂ ಮೈಮುರಿವುತಾಕಳಿಸಿ ಮೇಲೆದ್ದುನಿಂದಂ; ನದಿಯ ನೀರಿನೊಳಿ
ಳಿದು ಮೊಗದೊಳೆದು ಮುಳುಗಿ ಮಿಂದಂ; ನಡುನೀರಿನೊಳ್ ನಿಂದು
ಮೂಡುಕಡೆ ಮೊಗಮಾಡಿ ಕರಾಂಜಲಿಯೊಳುದಕಮಂ ಕೈಗೊಂಡು
ಮಾರ್ತಾಂಡನಂ ಧ್ಯಾನಿಸುತೆ ಜಪಿಸುತರ್ಘ್ಯಮನಿತ್ತು ತಾಂ ಪೂರೈಸಿದಂ
ಆಹ್ನಿಕನಿತ್ಯಕರ್ಮಂಗಳಂ ಮೇಣ್ ಅನುಷ್ಠಾನಮಂ. ಇನಿತೆಲ್ಲ
ಕಾರ್ಯಮಂ ತೀರಿಸುತೆ ಮೇಲೇರಿ ಬಂದಂ; ಮಡದಿಯಂ ಬಳಿಸಾರ್ದು
ನಿಂದಂ; ಮಿಂದೆದ್ದು ಬಳಿಗೈದಿ ಬಂದಿದ್ದ ಪತಿದೇವನಂ ಕಾಣುತ್ತೆ ಮೇಣ್
ಅವನ ತೊಯ್ದುವಸನಮಂ ನೋಡುತ್ತೆ ಕನಿಕರಿಸಿ ತಾನುಟ್ಟ ಸೀರೆಯಂ
ಸರಿಪಡಿಸಿ ನೀಡಿದಳ್ ಸುಗುಣೆ ತಾಂ ನೀಳದಾ ಸೆರಗು ತುದಿಯಂ
ಪ್ರಾಣೇಶ್ವರಂ ಕ್ಷಣಕಾಲ ಧರಿಸಿಲೆಂದು. ಸಮ್ಮತಿಯನಿತ್ತಾ ಭೂವಧೂವ
ಲ್ಲಭಂ ತನ್ನಾಕೆಯುಟ್ಟಿರ್ದ ತನ್ನ ದೋತ್ರಮಂ ಹಿಂಡುತ್ತ ಹರಹಿದಂ
ಬಿಸಿಲು ಬೀಳ್ವಲ್ಲಿ ನದಿಯ ತೀರದೊಳಲ್ಲಿ.

ಕಷ್ಟದೊಂದೇ ಕುಲಿಮೆಯೊಳ್ ಬೇಯುತಿರೆ ಪತಿಪತ್ನಿಯರ್
ಕೊರತೆಯೇಂ? ಅವರಿರ್ವರುಟ್ಟಿರ್ದ್ದರೆನಲ್ ಸೀರೆಯೊಂದಿಂ ಹೊರಗೊ
ಳಗೆ ಒಂದಾಗಿ ನಿಂದಿರ್ದ ದಂಪತಿಗಳಂ ಕಾಡುತಿರ್ದಾವುದೋ ಕಾಣದಾ
ಶಕ್ತಿ ತಾಂ ತೃಪ್ತಿಯಿಲ್ಲದೆ ತನ್ನ ಮಾಟದೊಳ್ ಹುಡುಕುತಿರ್ದುದು
ಹೂಡುವಾ ಹೊಸಪರಿಯ ಸಂಚುಗಳನುಮಂತೆಯೇ ಹೊಂಚುತಿರ್ದುದು
ಕಾಲಮಂ. ಕಾಯಮಂ ಕಾಣಿಸದೆ ಕಾರ್ಯದೊಳ್ ರೂಪುಗೊಂಡಾಡಿ
ಪುದು ಜಗವನೀ ಅವ್ಯಕ್ತಶಕ್ತಿ; ಕಾರ್ಯಕಾರಣಂಗಳ ಜತೆಗೆ ಕಾಲ ತಾಂ
ಕೂಡಿಬರೆ ಕೇಳ್ವುದೇಂ?

ಅಂಬರದೊಳೆಲ್ಲೆಲ್ಲೊ ಹಾರುತಾಡುತಲಿರ್ದ, ಹೊಂಬಣ್ಣದಿಂ ಮಿರುಗುವಾ ಹಕ್ಕಿಗಳ್ ಬಂದೆರಗಿದವು ರಭಸದೊಳ್ ಹರಹಿರ್ದ ಭೂಪಾಲನಂಬರದೊಳ್. ಕಾಣುತದನಾ ನಳಂ ತನ್ನ ಬಟ್ಟೆಯೊಳ್ ಬಂದಿಳಿದ ಪಕ್ಷಿನಿವಹಮಂ ಹಿಡಿವೆನೆಂಬಾತುರದಿ ತನ್ನಂ ಮರೆದು ಕಳ್ಳಹೆಜ್ಜೆಯನಿಟ್ಟು ಸಾರುತಿರೆ, ಕಾಲೆಳೆವ ರಭಸದೊಳ್ ಅರಿಯದಾತನ ರಮಣಿ ತಾಂ ಮುಗ್ಗರಿಸಿ ಬಿದ್ದು ಚೀರ್ದಾ ರವಕೆ ಕೊಕ್ಕಿನೊಳ್ ಪಿಡಿದೌಕಿ ಧೌತವಂ, ಬುರ್ರೆಂದು ಬೆಚ್ಚಿ ಪಾರ್ದುವಾ ಪಕ್ಷಿಗಳ್ ಕಣ್ಣೆತ್ತಿದಾ ಗಗನದೆತ್ತರಕೆ.

ನೋಳ್ಪುದೇನಂ! ಭಾಗ್ಯಹತನಾ ನೃಪಾಲಂ ತಾನುಡಲ್ ಸೆರಗನೊಲಿದಿತ್ತು ತನ್ನವಸರದಿ ಕಾಲ್‌ತಪ್ಪಿ ಬಿದ್ದಳುವ ತನ್ನಾಕೆಯುಂ ನೋಳ್ಪುದೇ? ತನ್ನಾಸೆ ಹರಿದು ತನ್ನದಾಗಿರ್ದುದೊಂದೇ ವಸನಮಂ ವಿಹಗತತಿ ಬಾಂದಳದಿ ಕೊಂಡುಯ್ವುದಂ ನೋಳ್ಪುದೇ?ಅನ್ಯಗತಿಯೆನಗಿಲ್ಲ; ಬತ್ತಲೆಯು ನಾಂ ನೀಡೆನುತೆ ಕೊಂಡವರ ಬೇಡಿದರು ದೊರಕದಾ ದೋತ್ರವೊಂದು ಕಡೆ, ದೇಸಿಗಂ ನಾನಾದೆ. ನಡೆ ನೀನು ನಿನ್ನ ಪಿತನೆಡೆಗೆ ಸುಖದೊಳಿರು ಎಂದಾಡಿದಾ ನುಡಿಗೆ ದುಃಖಿಸುತೆ ತನ್ನ ಸುಖಮಂ ತೊರೆದು ಬಳಿವಿಡಿದು ಬರುತಿರ್ಪಮಡದಿ ತಾನಿನ್ನೊಂದು ಕಡೆ; ನೋಳ್ಪುದೇಂ? ಮಾಳ್ಪುದೇಂ? ಬೇಕೆಂದೊಡಂ ಬರ್ಪುದೇ? ಬೇಡೆಂದೊಡೇನ್ ಪೋಪುದೇ? ವಿಧಿವಿಲಾಸದೊಳಿರ್ಪುದಿದು ಸಹಜಮಲ್ತೆ! ಪೋದುದಾ ಸಾರ್ವಭೌಮನ ಕೊನೆಯ ಸಿರಿ ತಾಂ; ಹಾರಿತೆತ್ತಲೋ ವಸನರೂಪದೊಳ್ ಪಕ್ಷಿಗಳ ನೆವದಿ. ಮುಸಣದಿಂ ಮರಳುವಾ ಬಂಧುಗಳ ತೆರದಿ ಬಿದ್ದಿರ್ದ ಮಡದಿ ತಾನೆದ್ದು ನಿಂದಿರ್ದಳಲ್ಲೆ ಬಾಳಿನೊಳ್ ಗಳಿಸಿರ್ದ ಪಾಪಪುಣ್ಯಗಳ ಗಂಟಿನಾ ಹೊರೆಯಂತೆ ಜತೆಗಾತಿಯಾಗಿ.

ಬಿದ್ದ ನೋವಂ ಕಾಣಿಸದೆ ಕಣ್ಣೊರಸಿಕೊಂಡೆದ್ದು ನಿಂದಿರ್ದ ತನ್ನರ್ಧಾಂಗಿಯುಂ ನೋಡುತ್ತೆ ಬರಸೆಳೆದು ಬಿಗಿದಪ್ಪಿ ಗಲ್ಲಮಂ ಪಿಡಿದಾಡಿಸುತೆ ನೆತ್ತಿ ಹಣೆ ಮೇಣ್ ಕಣ್ ಕದಪುಗಳ ಸವರುತ್ತೆ ಮೂಗಿನೊಳ್ ತಾಗಿರ್ದ ಕಿರುಗಾಯದಿಂ ಚಿಮ್ಮುತಿರ್ದಾ ನೆತ್ತರನೊರಸುತ್ತೆ ನುಡಿಯುತಿರ್ದಂ ನಳಂ ತನ್ನನೊಲ್ವಾಕೆ ಉಮ್ಮಳಿಸುತಿರೆ ತನ್ನೆದೆಯ ಆಳದೊಳ್ ಸಾವು ನೋವುಗಳ ಭಾವಮಂ ತೋಡಿ ತೋಡಿ.

"ಹೃದಯೇಶ್ವರೀ ಕಂಡೆಯಾ ಕಾಡುತಿಹ ವಿಧಿಯ ಕೈವಾಡವಂ? ತನ್ನ ಪದಹತಿಯೊಳೆನ್ನಂ ತುಳಿತುಳಿದು ನುಗ್ಗುನುರಿಯಾಗಿಸುತಲಿನ್ನುಂ ದೂಡುತಿರ್ಪುದು ದರಿದ್ರತೆಗೆ. ಎಂತಾನು ಬಾಳಲಿನ್ನು? ದೇವಿ, ನೀನಂದು ಬಂಧುಬಾಂಧವರ ಸಂದಣಿಯುಂ ನೋಡುತಿರೆ ಪಿಡಿದಿರ್ದೆ ಹಂದರದೊಳೆನ್ನ ಸೆರಗಂ. ಇಂದಿದೋ ಸಂದ ಭಾಗ್ಯದಿ ನೀನಿತ್ತು ನಾನುಡುವ ಪಾಡಾಯ್ತು ನಿನ್ನಸೆರಗಂ. ದುಃಖಾಗ್ನಿ ದಹಿಸುತಿರ್ಪುದು ನನ್ನ. ಸತ್ತಿಲ್ಲನಾಂ; ಜೀವವಿದೆ; ಬದುಕಿಲ್ಲನಾಂ ಪ್ರಿಯತಮೆ! ಸತ್ತು ಹೆಣವಾದಾಗ ಮತ್ತದನೆ ಹೊತ್ತು ಕಾಷ್ಠದೊಳ್ ಕಿಚ್ಚೊಟ್ಟಿ ಸುಡುವಾಗ ಹೊದೆಯಿಪರ್ ಹಚ್ಚಡವನೊಂದ. ಮಸಣಕಾಗಿಯೆ ಹೊರುವ ಹೆಣವಾದರೇಂ? ಅದಕಿರುವ ಭಾಗ್ಯವೆನಗಿರ್ಪುದೇ? ಬಟ್ಟೆಯೊಳ್ ಮೈಮುಚ್ಚಿ ಸುಟ್ಟು ಮತ್ತಿಲ್ಲವಾದಪುದು. ಚಕ್ರೇಶ್ವರಂ ನಾನಾಗಿ ಮೊಳದುದ್ದ ಬಟ್ಟೆಗುಂ ಗತಿಗೆಟ್ಟು ಹೆಣಕಿಂತ ಕಡೆಯಾಗಿ ನೀನುಟ್ಟ ಸೀರೆಯಾ ಸೆರಗಿನೊಳ್ ಮಾನಮಂ ಮುಚ್ಚಲಾಯ್ತೆ? ದಮಯಂತಿ ನರರಲ್ಲ ನಾವ್; ನರರ ಹೆಣವಲ್ಲ ಮೃಗವಲ್ಲ ಮತ್ತಾವ ಜಂತುಗಳೂ ನಾವಲ್ಲ. ನಾವೇಕೆ ಹುಟ್ಟಿದೆವೋ? ಮತ್ತೇಕೆ ಈ ಪಾಡುಪಡುತಿಹೆವೋ? ಸತ್ತಾದರೂ ಒಡಲ ನೋವಂ ತಡೆಯಲಕ್ಕುಮೆ? ಪೇಳು. ಸಾವುಂ ತೊರೆದಿರ್ಪುದೆಮ್ಮಂ. ನೋವಿದೇಂ ಸೈಸಲಪ್ಪುದೆ ಕಾಂತೆ? ಗಂಡಹೆಂಡಿರು ನಾವು ಉಟ್ಟಿರುವೆವಿರ್ವರೊಂದೇ ಬಟ್ಟೆಯುಂ. ಬಾಳಿದೇಂ? ಭವಣೆಯೇಂ?"

ಶೋಕವಿಹ್ವಲೆಯಿಂತು ಕೇಳುತಿರೆ ಮರುಗಿದಳ್ ಮನದೊಳಗೆ. ಮುತ್ತರಸಿದಳ್ ಮಾತುಗಳ ಮರುನುಡಿಗೆ. ತುಂಬುತೆದೆಯುಂ ತುಳುಕುವಳಲಿಂ ಬಿಗಿದು ಬೀಗುತಿರೆ ಕಂಠಂ, ಒಣಗಿರ್ದ ರಸನೆಯೊಳ್ ನುಡಿಯಲಾರದೆ ನುಡದಿ ತಾಂ ತಡೆತಡೆದು ರೋದಿಸುತೆ ಬೇಡಿದಳ್ ಧರಾನಾಥನಂ ತನ್ನ ಕಾಂತನಂ "ಸೈರಣೆಯ ನೀಂ ತಾಳ್ವುದೆ"ಂದು.

ಕೇಳಿದಂ ಸುದತಿಯಾಡಿದ ನುಡಿಯನಾ ನಳಂ. ಕೇಳಿ ಮಾಳ್ಪುದದೇನು? ತನ್ನಳಲನಾವುದೋ ಕಪಿಯ ಮುಷ್ಟಿಯುಂ ಬೆದಕುತಿರ್ದುದು ಭರದಿ, ಮತ್ತೊಡಲ ಕರುಳಂ ಮೇಣ್ ಕರಣಂಗಳಂ ಪಿಡಿದು ಹಿಚುಕಿ. ಒಂದೆ ವಿಷಯದೊಳೊಂದೆ ದುಃಖಮಂ ದಂಪತಿಗಳೊಂದಾಗಿ ದುಃಖಿಸಿದೊಡೇಂ, ದುಃಖವಿಮ್ಮಡಿಸಿತಾ ದುಃಖಿಗಳ್ಗೆ.

ಮರುಮರುಗುತವರು ಮೌನದೊಳ್ ಮುಂದಡಿಯನಿಟ್ಟು ಪಯೋಷ್ಣಿಯಂ ದಾಂಟಿ ಮುನ್ನಡೆದು ನಡೆದರೆಲ್ಲೋ ಕಾಡಿನೊಳ್. ಕಡು ಕಷ್ಟಮಾಗಿ ಅಡವಿಯೊಳ್ ದಾರಿಕಂಡಲ್ಲಿ ನಡೆಯುತ್ತೆ ಮುಗಿದಲ್ಲಿ ತಿರುಗುತಲೆಯುತ್ತೆ ತಡೆತಡೆದು ಸಾಗುತಿರ್ದುದು ಪಯಣ ತಾಂ. ದಂಟಿಯಂ ಕಳೆದಿರ್ದ ಕುರುಡನಲೆಯುವ ತೆರದಿ, ಕಣಿವೆಯೊಂದಂ ಪಿಡಿದು ಮುಂದೆ ನಡೆಯುವ ನಳಂ ಬಿದ್ದಿರ್ದ ಮರವೇರಿ ಮಗುಚುತಿಳಿಯುವನಿತರೊಳೆ ಹಿಂದಿರ್ದ ದಮಯಂತಿ ತಾನದೋ ಸುತ್ತಿರ್ದ ಸೀಗೆಯೊಳ್ ತೂಗುಸೊಡರಂ ಪೋಲ್ದಳು. ಎಂತಾನುಮವಳ ಕೆಳಗಿಳಿಸಿ ಸಾಧಿಸುತೆ ಪ್ರಯತ್ನಮಂ ನಿಂದಿರ್ದೊಡಲ್ಲಿ ಕಗ್ಗತ್ತಲೆಯೊಳೊಂದು ತುಣುಕು ಮಿಣುಕಿದ ತೆರದಿ ಕುಡಿನಗೆಯು ಬೆಳಗಿತಿರ್ವರ ವದನಮಂ ಮಿಂಚಿನಂತೆ. ನಡೆದರಲ್ಲಿಂ ಮುಂದೆ ಒಣಗಿದೆಲೆಕಡ್ಡಿಗಳ್ ಬಿದ್ದಿರ್ದ ದಾರಿಯೊಳ್; ಮೆತ್ತನೆಯ ಮೆತ್ತನೆಯ ಹಾಸೆನುತಲಡಿಯಿಡಲ್ ಅದರಡಿಯ ಮುಳ್ಳುಗಳ್ ನಾಂಟಿದುವು ಕೀಲ್ ಜಡಿದ ತೆರದಿಂದೆ ನಾಲ್ಕು ಪಾದಂಗಳಂ. ಮತ್ತದಂ ಕೀಳುವುದ್ಯೋಗದೊಳ್ ಸಾಧನವನರಸುತ್ತೆ ಕಾಲನೆಳೆದೆಳೆದು ನಡೆವನಿತರೊಳ್ ಪಾಳ್ ಬಿದ್ದು ಕಾಲಂ ಜೀರ್ಣಿಸಿರ್ದೊಂದು ಮಂದಿರಂ ಗೋಚರಿಸಿತಾ ಕಾಡಿನೊಳಗೆ ನಳಗೆ.

ಕಗ್ಗಲ್ಲಿನೊಳ್ ಕಡಿದುಮಾಡಿರ್ದ ಕಂಬಗಳು, ಕಲ್ಲಿನಾ ಗೋಡೆಗಳು ಕರಿಶಿಲೆಯ ಹಲಗೆಗಳು, ಮೇಣ್ ಕಲ್ಲಲ್ಲದೇನನುಂ ಬಳಸದಾ ಮಂದಿರಂ ಶಾಶ್ವತಕೆ ಸಲಲೆಂದಾರು ಕಟ್ಟಿರ್ದರೇಂ? ಕಾಲ ತಾಂ ನೂಣೆಯಲಾರದೆ ಕೃತಿಯು? ಅಚಲವೆನಿಪ್ಪಾವ ಗಿರಿಯಾದರೇಂ ಕುಲಿಶಹತಿಯೊಳ್ ಕೆಡೆಯದಿರ್ದಪುದೆ? ಧರೆಯೊಳಿಪ್ಪನಿತೆನಿತೊ ನದಿನದಂಗಳ ನೀರೆಲ್ಲಮಂ ಪೀರ್ದು ನರರೆಲ್ಲರುಂ ಸೇರಿ ಮೊಗೆಮೊಗೆದು ಮುಗಿಯದನಿತು ನೀರಿಂ ಕೂಡಿ ಮತ್ತಾವ ಪ್ರಾಣಿಗುಂ ಕುಡಿಯಲೀಯದ ತೆರದಿ ಲವಣಾಂಬುನಿಧಿಯಾಗಿ ಸಾಗರಂ ಜಲನಿಧಿಯು ತಾನೆಂದು ಮೆರೆದೊಡೇಂ? ಕುಂಭಸಂಭವಗೆ ಸಾಟಿಯೇ? ವಿಶ್ವಸೃಷ್ಟಿಯೊಳೇನಿರ್ದರೇಂ? ಕಾಲಚಕ್ರದ ಭರಕೆ ಬೇರಾಗದಿರ್ದಪುದೆ? ಪರಂಪರೆಯ ಬಳಿವಿಡಿದು ಬಂದಿರ್ದ ಸಿರಿ ರಾಜ್ಯಕೋಶಂಗಳೇನುಳಿದುವೇ ಸಾರ್ವಭೌಮಗೆ ನಳಗೆ? ಮತ್ತೇನು ಮಂದಿರವು ತಾನು

ಳಿವುದೇ? ಕಾಲವಂ ಮೀರಿ ಕುಸಿದು ಬಿದ್ದಿತ್ತಲ್ಲಿ ಹುಲಿಮೆದ್ದ ಹುಲ್ಲೆಯಂತೆ. ನೆಟ್ಟುನಿಂದಿರ್ದ ಕಂಬಗಳ್ ಬಾಗುತೊಂದನೊಂದಪ್ಪಿ ನಿಂದಿರ್ದುವಲ್ಲಿ ಸುಖದುಃಖದಾ ಜತೆಗಾರರಾಗಿ. ಶಿಲೆಯ ತೊಲೆಗಳು ಮುರಿದು ಕೆಡೆದಿರ್ದುವಲ್ಲಿ ಬಿದ್ದಗೋಡೆಗಳ ಮೇಲೆ ಜನ್ಮಾಂತರದ ಬಂಧುಗಳ ತೆರದಿ. ಮೂಲೆಗಳಲ್ಲಿ ಬೆಳೆದಿರ್ದ ಹುತ್ತಂಗಳೆದ್ದು ಬಿದ್ದ ಶಿಲೆಗಳನೊತ್ತಿ ಹಿಡಿದಿರ್ದುವೆನೆ ಮೆತ್ತಿಕೊಂಡಿರ್ದುವಲ್ಲಿ ಪೂರ್ವಸಂಚಿತಕರ್ಮಬಂಧನವ ಹೋಲುತ್ತೆ.

ಕಾಡಿನೊಳ್ ತನ್ನ ಕಣ್ಣಿಂಗೆ ತನ್ನಂತೆಯೇ ಕಾಣಿಸಿದ ಭಗ್ನಮಂದಿರವ ತಾನೊಳಪೊಕ್ಕು ನೃಪವರೇಣ್ಯಂ ಮಡದಿಯೊಡಗೂಡಿ ಮಂಡಿಸಿದನಾ ಬರಿ ನೆಲದ ಮೇಲೆ. ಸುತ್ತಲುಂ ಕತ್ತೆತ್ತಿ ನೋಡಿದಂ; ಮತ್ತದರ ಕೊಂಡಾಡಿದಂ ಪ್ರಾಚೀನತೆಗೆ. ಯಾವ ರಾಯನ ಕಾಲದೊಳ್ ಕಟ್ಟಿಸಿದ ಕೃತಿಯೋ? ಮತ್ತೇನದರ ಸಂಸ್ಕೃತಿಯೋ? ಕಡಿಕಡಿದು ಪಾಷಾಣವಂ ಶಿಲ್ಪಿ ತಾಂ ತನ್ನ ಕೈವಾಡದಿಂದಾಕೃತಿಯ ಹದಗೊಳಿಸಿ ಗಳಿಸಿರ್ದ ಕೀರ್ತಿ ತಾಂ ಮಣ್ಣುಕೂಡಿತ್ತು. ಅರೆಮುರಿದ ಹಲಗೆಗಳ ಮಧ್ಯದಲಿ ಗಬ್ಬಿಲವು ತಾನೊಂದು ಜೋಲುತಿತ್ತು. ಮತ್ತೊಂದು ಕಡೆ ಜೇಡನಿನಾ ಹುಟ್ಟು ತಾಂ ನೇಲುತಿತ್ತು. ಮಣ್ಣುನುಂಡೆಯಗೊಂಡು ಮನೆಮಾಡಿಕಲ್ಲಿನೊಳ್ ಅಂಟಿಕೊಂಡಿರ್ದನಿತೆನಿತೋ ಕೀಟಗಳ್; ನೊರಜುಗಳ್ ನುಸಿಗಳಿರುವೆಗಳ್ ನೆಲಸಿರ್ದುವಲ್ಲಿ ಮೇಣ್ ಹುಳಹುಪ್ಪಟೆಗಳು. ಯೋಚಿಸುತೆ ಮೇಣ್ ನೋಡುತಿರಲೀ ತೆರದಿ ನಳನೃಪಂ ದಮಯಂತಿ ತಾಂ ಬಳಿಯೊಳೇ ಬೆಳೆದು ಬಗ್ಗಿನಿಂದಿರ್ದೊಂದು ಮೆಳೆಯ ಮುಳ್ಳುಂ ಮುರಿದು ಪ್ರಾಣೇಶ್ವರನ ಪಾದಗಳಂ ಪಿಡಿದೆತ್ತಿ ತನ್ನ ತೊಡೆಯ ಮೇಲಿಟ್ಟು ಪಾದದೊಳ್ ನಾಟಿರ್ದ ಮುಳ್ಳುಗಳನೀ ಮುಳ್ಳಿಂದೆ ಚುಚ್ಚಿ ಬಿಡಿಸುತ್ತೆತ್ತಿ ಕಳೆಯುತಿರ್ದಳ್ ಪತಿಗೆ ನೋವಾಗದಂತೆ. ನಳನುಮಂತೆಯೆ ತನ್ನ ಸತಿಯ ಕಾಲಿನೊಳಿದ್ದ ಮುಳ್ಳುಗಳ ತೆಗೆತೆಗೆದು ಕಳೆಯುವನಿತರೊಳ್ ತಂಪಾಗಿ ಬಹುದೂರದಿಂ ಬೀಸಿ ಬಂತೊಂದು ಗಾಳಿ ಮಂದಗತಿಯಿಂದೆ; ಮಂದಿರದ ಮೂಲೆಯೊಳ್ ತಾಂ ಕಂಡಿರ್ದ ಜೇನು ಹುಟ್ಟಂ ಹರಿದು ತರೆ ನಳಂ ಸತಿಪತಿಯರಿರ್ವರುಂ ಸವಿದದನು ತಂಗಾಳಿಯೊಳ್ ಮೈಯೊಡ್ಡಿಮಲಗಿದರ್ ವಿಶ್ರಾಂತಿಗಾಗಿ.

ಬಳಲಿ ಬೆಂಡಾದವರನಾವರಿಸೆ ನಿದ್ರೆ ತಾನೆಲ್ಲಿ ಕಾದಿರ್ದಳೋ! ಪತಿ

ಪತ್ನಿಯರನಿರ್ವರಂ ಪಿಡಿವುತೊಂದೇ ಭರದಿ ತನ್ನ ತೋಳ್ ತೊಟ್ಟಿಲೊಳಿಟ್ಟು ತೂಗಿದಳ್ ತಂಬೆಲರ್ ಜೋಗುಳವ ಹಾಡುತಿರಲು. ಆದೊಡೇಂ ಮರು ಕ್ಷಣಕೆ ಕಣ್ತೆರೆವುತೆದ್ದು ಕುಳಿತನಾ ನಳಂ; ನೋಡಿದಂ ನಿದ್ರಿಸುತಲಿನ್ನುಂ ಮಲಗಿರ್ದ ತನ್ನರ್ಧಾಂಗಿಯಂ,ಮತ್ತವಳ ಬನ್ನಮಂ. ಹಸಿದಹೊಟ್ಟೆಯೊಳ ನ್ನಮಂ ತಿನ್ನಲಿಲ್ಲದೆ ಕಾಡಿನೊಳ್ ಬಿದ್ದ ಹಣ್ಣಂ ಮೆದ್ದು ಹರಿವ ನೀರಂ ಕುಡಿದು ನಿದ್ರೆಯಿಲ್ಲದೆ ನಟ್ಟಡವಿಯೊಳ್ ನಡೆನಡೆದು ಬಳಲಿ ಬೀಳು ತೇಳುತೆ ಪ್ರಾಣಪತಿಯಂ ಬಿಟ್ಟಗಲಲೊಲ್ಲದೆ ಬೆಳ್ವಿಡಿದು ಬರುತಿರ್ದು ನಿರ್ಜನಾರಣ್ಯದೊಳಗೀ ಭಗ್ನಮಂದಿರದಿ ಬಸವಳಿದು ಬರಿನೆಲದಮೇಲಲ್ಲಿ ಬಿದ್ದಿರ್ದ ಕಾಡ ಕಸಕಡ್ಡಿ ಹುಡಿಮಣ್ಣುಗಳ ರಾಶಿಯೊಳ್ ಮಲಗಿ ನಿದ್ರಿಸ ಲಾಯ್ತೆ ಗತಿ ಆ ಸತಿಶಿರೋಮಣಿಗೆ, ನಿಷಧಾಧಿಪನ ಸೌಭಾಗ್ಯದಾ ಸಿರಿಯರಸಿಗೆ. ಧೂಳಿಡಿದ ಕೈಕಾಲು ಮೈ ಮುಖಗಳುಂ ಸೊರಗಿರ್ದ ವದ ನವುಂ ಕೆದರಿರ್ದ ಕೇಶಂಗಳುಂ ಮರೆಯಿಸಿರ್ದುವಾಸತಿಯ ಲೋಕ ಮೋಹಕರೂಪಮಂ. ತನ್ನೆರಡು ಕಾಲುಗಳನೆಳೆದು ತುಸು ಮಡಿಸಿ ತೋಳಿನೊಳ್ ತಲೆಯಿಟ್ಟು ಕಾಂತನಾನನವನೀಕ್ಷಿಸುತೆ ತಾವಿರ್ವರುಟ್ಟಿರ್ದ ಸೀರೆಯಂ ತನ್ನೆಡಗೈಯ ಪಿಡಿಯೊಳೌಕಿ ಪಿಡಿಯುತ್ತೆ ಮಲಗಿರ್ದ ಶೋ ಕಾರ್ತೆತಾಂ ನಿದ್ರಿಸಿರ್ದಳ್ ಮುರುಟಿ ಬಿದ್ದಿರ್ದ ನಳನೃಪನ ಮಾನದಂತೆ. ನೋಡಲಾರ್ಪನೆ ನಳಂ? ನೋಡದಿರ್ದಪನೆ ತಾಂ? ತನ್ನಾಕೆ ದುರ್ದಶೆಯೊ ಳಿಂತೊರಗಿ ನಿದ್ರಿಪುದ ನೋಡಿದಾ ನೋಟ ತಾಂ ನಳನೆದೆಯ ಸೀಳುತುರ ವನು ಹೊಕ್ಕು ಕೊರೆಯ ತೊಡಗಿತು ಕರುಳ ಕಲ್ಪತರುವಂ ಹೆದ್ದುಂಬಿ ಕೊರೆವ ತೆರದಿ. ತನ್ನೆರಡು ಹಸ್ತಂಗಳಂ ನೊಸಲ ಮೇಲಿಟ್ಟು ಮತ್ತದೇಪಾ ಣಿಯೊಳ್ ಕಣ್ಗಳನ್ನೊತ್ತಿ ಮುಚ್ಚುತ್ತೆ ತಾಳಲಾರದೆ ತಾಪದಿಂ ಬಿದ್ದ ನಲ್ಲಿಯೆ ಧೂಳಿನೊಳ್ ಮುಂದೆಸೆಗೆ ತಾಂ ಪಡೆದ ಪರಿಭವಕೆ ಹಣೆಚಾಚಿ ದಂತೆ. ಮನದೊಳಾವಾವ ಭಾವಗಳೋ? ಮತ್ತೇನು ಪರಿಭವದ ನೆನಹು ಗಳೊ? ನಾಡಿಂದ ತಾವೈತಂದ ಪಯಣದುದ್ದದೊಳ್ ಮೊಳಕೊಂ ದೊಂದು ಚಿತ್ರದೊಲ್ ಚಿತ್ರಿಸುತೆ ಕಣ್ಣಮುಂದಿಟ್ಟು ವಿಧಿಯು ತಾನಣ ಕಿಸುವ ತೆರದಿಂದೆ ತೋರಿತಾ ಭೂವರನ ಮನಕೆ. ಬವರದೊಳಗಿದಿರಾಗಿ ಬಂದಿರ್ದ ಬಾಹುಜಭಟಸ್ತೋಮಮಂ ಮೇಣ್ ಅಸುರರಾ ವಿಸರಮಂ

ನಿಜಶೌರ್ಯದೊಳ್ ಸದೆದು ಸಮ್ರಾಜನಾದೊಡೇಂ? ಸತ್ಯನಿಷ್ಠೆಯೊಳೆಂದು ದಿಕ್ಪಾಲರಂ ಮೆಚ್ಚಿಸುತೆ ವರಗಳಂ ಪಡೆದಿರ್ದೊಡೇಂ ಪಡೆದ ಪ್ರಾಚೀನಫಲದಿ ತಾಂ ಬಂದಡಸಿರ್ದ ಪರಿಭವದ ದುಗುಡಮಂ ದೂಡಲಪ್ಪುದೆ? ತನ್ನೆಡೆಯ ಆಳದಿಂ ಮೇಣ್ ಜೈಸಲಪ್ಪುದೆ ಸಾಧ್ಯಂ? ತರಹರಿಸಿ ಬಿದ್ದಿರ್ದ ನರಪುಂಗವಂ ನಿಟ್ಟುಸಿರ ಸೂಸಿದಂ ಮೇಲೆಳ್ದು ಕುಳಿತು ಮೇಲೆ ಮೇಲೆ. ಮುರುಕು ಮಂಟಪದೊಳಿನ್ನಾವ ಮೂಲೆಯಲಿ ಕಾದಿರ್ದುದೋ ರಣಹದ್ದ[illegible]ತಾನೊಂದು? ಹಾರಿತಾಕ್ಷಣವೆ ಗರಿಗೆದರಿ ಹುಂಕಾರದಿಂದೇನನೋ ಸಾರುತ್ತೆ ಚೀರುತಲ್ಲಿಂ ನಳನೃಪಂ ನೋಡುತಿರಲು. ನಿಮಿಷನಿಮಿಷಂಗಳಂ ಕೂಡುತೊಟ್ಟೈತೆ ಘಳಿಗೆಗಳ್ ತುಂಬಿ ಬರೆ ತಟ್ಟೈ ತಾಂ ಭಾರದಿಂ ಕೆಳಗಿಳಿಯೆ ಕತ್ತೆತ್ತಿ ನೋಡಿದಂ ಹೃದಯ ಭಾರದ ನಳಂ ಬಾಂದಳದಿ ಪಡುಗಡೆಯ ತಗ್ಗಿನಾ ದಿನಮಣಿಯನು. ಕೆಳಗಿಳಿಯಲಾರದಿರ್ದೊಂದು ಗುಂಡು ತಾಂ ಬಾಯ್ಗಿಂ ಬರಲಾರದಿರ್ದು ಗಂಟಲೊಳ್ ಸೆರೆಗೊಂಡತೆರನಾಯ್ತು ನೃಪಗೆ ಹದಿಬದಿಯ ಪತಿಗೆ. ಭಾವಿಪನದೇಂ ಮನದೊಳಗೆ ತನ್ನ ದರಿದ್ರತೆಯನಂತೆಯೇ ತನ್ನ ಭಾರ್ಯೆಯುಂ. ಮಡದಿಯೀ ದಮಯಂತಿ ತಾಂ ಕೈಪಿಡಿಯುತೆನ್ನಂ ಪಡೆದ ಭಾಗ್ಯಕೆ ಮಣ್ಣೆರಚಿದಂತಾಯ್ತೆನ್ನ ಮುಖದಿ. ಮತ್ತವಳ ನಾಂ ವರಿಸಿ ಪಡೆದಿರ್ದ ಭಾಗ್ಯದೊಳ್ ಅವಳುಟ್ಟ ಸೀರೆಯಾ ತುದಿಸೆರಗನಾದರುಂ ಪೊದೆಯಿಸುತ್ತಿರ್ಪೆ ನಾಂ. ನಿರ್ಭಾಗ್ಯನಾದೆನ್ನನುಂ ನೆಚ್ಚಿ ಬಂದಿರ್ದಾಕೆ ತಾಂ ಬಿಸಿಲನೀವರೆಗೆ ಕಂಡವಳಲ್ಲ, ನಡೆದವಳಲ್ಲ. ಕವಲಿಲ್ಲದೊಲವಿನಿಂ ದರಿದ್ರನಾದೆನ್ನ ಜತೆಗೆ ನಡೆತಂದು ಪರಿಪರಿಯ ಪರಿಭವಕೆ ತುತ್ತಾಗಿ ಕೈಹಿಡಿದ ಪತಿಯಾದ ನಾನಿರ್ದು ನನ್ನಿದಿರೊಳೇ ನನ್ನ ಕಾಲ್ಬುಡದಿ ಕ್ರಿಮಿಕೀಟಗಳ ಜತೆಗೆ ಹುಡಿ ಧೂಳಿನೊಳ್ ಬಿದ್ದು ನಿದ್ರಿಸಲಾಯ್ತೆ ವೈದರ್ಭಿಯಾ ಪುಣ್ಯಂ? ಭೀಷ್ಮಕನ ಮಗಳ ಭಾಗ್ಯಂ ಪರಮ ಪಾಪಿಯ ಪೊರ್ದಿ ಪಡೆದುದೇಂ ಪುಣ್ಯಾತ್ಮೆ? ಹಾಳಾದ ಬಾಳುಂ ಬರಿ ನೆಲದ ಧೂಳುಂ. ಮುಂದೇನು ಕಷ್ಟ ಕಾದಿರ್ಪುದೋ ಪುಣ್ಯ ಹೀನಗೆ ನನಗೆ? ನನ್ನ ಪಾಪದ ಫಲದಿ ನನ್ನಾಕೆ ಪಾಲುಗೊಂಡೇಕೆ ಪರಿತಪಿಪುದಿನ್ನುಂ? ನನ್ನನೊಲ್ದಾ ತಪ್ಪಿತಕೆ ತಾನಿಷ್ಟರೊಳೆ ಶಿಕ್ಷೆಯುಂ ಪಡೆಪಡೆದು ತಾಳಲಾರದೆ ತೊಳಲಿ ಮಲಗಿರ್ಪಳಲ್ಲಿ. ಕೊನೆ

ಯಿಲ್ಲವೇನಿವಳ ಪರಿಭವಕೆ? ಕಣ್ಣಿಲ್ಲವೇ ವಿಧಿಗೆ? ಸಂದಬಾಳ್ ಎಂತಾದೊಡೇಂ? ಮುಂದೆದ್ದು ತಂದೆ ತಾಯ್ಗಳ ಸೇರಿ ಮತ್ತಿವಳು ಕಾಲನುಂ ಕಳೆಯುತಿರಲಿ; ಸುಖದೊಳಿರಲಿ. ಎಚ್ಚರಿಸುತವಳಂ ಪೋಗೆಂದೊಡೇಂ ಕೇಳ್ವಳೇ? ತೊರೆವಳಸುವನ್ನಲ್ಲದೆನ್ನಂ ಬಿಡಳು. ಕರದೊಯ್ವೆನೇ? ಕಾಡು ತಿನ್ನಂ ಕಾಡಿನೊಳ್ ಕಷ್ಟಕ್ಕೆ ದೂಡುವೆನೇ? ಕೊರಗಿಸುತೆ ಕೈಯಾರೆ ಕೊಲ್ವೆನೇ? ಸಾಯ್ವೆನೇ? ಪರಿಣಯದಿ ಕೈವಿಡಿದು ಕರೆತಂದ ಕಾಂತೆಯಂ ಕಾಯಲಾರದೆ ಕಾಡಿನೊಳ್ ಕೈ ಬಿಟ್ಟು ನಡೆದಪುದೇ? ಬಂಧುಗಳ್ ಮೇಣ್ ತಂದೆ ತಾಯ್ಗಳನ್ನೆಲ್ಲರಂ ಬಿಟ್ಟೆನ್ನ ಪಾದವೇ ಗತಿಯೆಂದು ನಂಬಿ ಬಂದಿರ್ದ ಸುದತಿಯಂ ಮತ್ತಿಲ್ಲಿ ಮಲಗಿ ನಿದ್ರಿಸುತಿರ್ಪ ನನ್ನರ್ಧಾಂಗಿಯಂ ಬಿಟ್ಟಗಲಿ ಕಡೆಗಾವ ಮಾತನುಂ ನುಡಿದಲ್ಲದೆದ್ದು ಪೋಪುದು ಧರ್ಮವೇ? ಪೇಳ್ದೊಡೊಪ್ಪುವಳಲ್ಲ. ಪೇಳದಿರ್ದೊಡೆ ಮನಕೆ ಹಿತವಿಲ್ಲ. ಅಗಲಲೇ? ಸಾಧ್ಯವೇ? ಸತಿಯ ನಾಂ ಅಗಲದಿರ್ದೊಡೆ ಸಾಧ್ಯವೇ? ಚಿಂತಿಸುತಲೀತೆರದೊಳಾಧರಣಿಪಂ ತನ್ನರಸಿಯಂ ಬಿಟ್ಟಗಲಿ ಪೋಪಮನದಿಂದೆ ಸ್ಥಿರತೆಗೇರಿಸುತಿರ್ದನೊತ್ತಾಯದಿಂ ಚಿತ್ತಮಂ. ಸ್ಥಿರತೆಯೇನಸ್ಥಿರತೆಯೇಂ? ಕಾಡುತಿಹ ವಿಧಿಯು ತಾಂ ಕುಣಿಸಿದಂದದಿ ಕುಣಿಕುಣಿದು ದಣಿವುದಲ್ಲದೆ ಬೇರೆ ಹೊಣೆಯುಂಟೆ ಮರ್ತ್ಯದೊಳ್ ಮಾನವಗೆ? ನಳನುಮಂತಯೆ ತನ್ನ ಶಿರವನೊಪ್ಪಿಸುತೆ ಸಂಚಿತಕೆ ಕಾಣಿದಿರ್ದಾವುದೋ ಕುಣಿಕೆಯೊಳ್ ಬಿಗಿದಿರ್ದ ತನ್ನ ಕೊರಳಂ ಸೆಳೆಯುತಿರೆ ಕಾಲತಾಂ ಭರದಿ ಮಡದಿಯಂ ಬಿಟ್ಟೋಡುವುದ್ಯೋಗದೊಳ್ ಸಾಹಸಕೆ ಮನತಂದು ಕೈಮುಗಿದು ನಿಂದಂ. ವಿಪಿನದಭಿಮಾನದೇವತೆಗಳಂ ಭೂದೇವಿಯಂ, ಗಾಳಿಯಂ, ದಿಕ್ಪಾಲರಂ ದಿನಮಣಿಯನಿಂದುವಂ ನಿಂದು ಪ್ರಾರ್ಥಿಸುತೆ ತನ್ನರಸಿಯಂ ಮೇಣ್ ಸಾಧ್ವಿ ದಮಯಂತಿಯಂ ಬನದೊಳಗೆ ಬಿಟ್ಟಗಲಿ ಪೋಪ ತನ್ನಂ ರಕ್ಷಿಸುತೆ ಕರುಣದಿಂ ಕಾಯ್ವುದೆಂದವಂ ಕೈಮುಗಿದನು. ಕ್ಷಣಕಾಲ ಧ್ಯಾನಿಸುತಲೇನನೋ ಮನದೊಳಗೆ ಮಡದಿಯುಟ್ಟಿರ್ದ ಸೀರೆಯೊಳ್ ತಾನುಟ್ಟ ತುದಿಯನಾಕ್ಷಣವೆ ನಾಲ್ವೊಳಕೆ ತುಂಡಾಗಿ ಹರಿದು ಮತ್ತವಳನವಲೋಕಿಸುತೆ ದೀನಾನನವ ಬಗ್ಗಿ ನೋಡುತ್ತೆ ಕಣ್ಣೀರ ಸುರಿಸುತ್ತೆ ನಿಟ್ಟುಸಿರ ಸೂಸುತ್ತೆ ಕೈಯೆತ್ತಿ ಎಲ್ಲಾದರೇಂ ಸುಖಿಯಾಗು ನೀನೆಂದು

ಹರಸುತ್ತೆ ಕಾಲ್ತೆಗೆದು ನರೋತ್ತಮಂ ಪಿಂದಿರುಗಿ ತನ್ನಾಕೆಯಂ ನೋಡುತ್ತೆ ಮತ್ತಿರದೆ ನೋಡುತ್ತೆ ಮರುಗುತ್ತೆ ತನ್ನರ್ಧಾಂಗಿಯಂ ಬಿಟ್ಟತ್ತ ನಡೆದಂ ನಡೆದನು. ಹತ್ತೆಂಟು ಹಜ್ಜೆಯಂ ನಡೆದೊಡನೆ ಮತ್ತಾವುದೋ ಪಾಶತಾಂ ಕಾಲ್ ಬಿಗಿದು ಜಗ್ಗಿ ಸೆಳೆಯುತಿರೆ ಪಿಂದೆಸೆಗೆ ಭೂವರಂ ತಿರುಗುತೋಡುತ ಬಂದು ಪಿಡಿದಪ್ಪಿ ತನ್ನಿನಿಯಳಂ ತಳ್ಕಿಸುವ ತವಕದೊಳ್ ಕೈನೀಡೆ ಮತ್ತೇನ ನೆನೆದನೋ? ತಡೆದು ತಾಂ ನಿಂದನಂತೆಯೆ ಮಂಕನೊಲ್ ನಿಜಶಿರದಿ ಕೈವೆರಡ ಹೊತ್ತು. ಬಗೆಗೊಂಡ ಭಾವಗಳು ಮತ್ತೇನೇನೋ ನೆನಹುಗಳು ದುಃಖದುದ್ವೇಗದೊಳೆ ಲೀನವಾದಂತೆ ಮತ್ತೊಸರಿದಶ್ರುಗಳ್ ತೊಟ್ಟಿಕ್ಕುತಿರೆ ಮರವಟ್ಟನಂತಿರ್ದ ಭೂಪಾಲಕಂ. ಕೆದರಿರ್ದ ತಲೆಯಂ ತುರಿಸುತ್ತೆ ಮೇಣ್ ತನ್ನೆರಡು ಕೈಯ್ಗಳಿಂ ಜಗ್ಗುತೆಳೆಯುತ್ತೆ ಧೂಳಿಡಿದ ಕೇಶವಂ ಹಲ್ಗಡಿದು ಮತ್ತಾಡನುರೆಕಚ್ಚಿ ರಸನೆಯಂ ಜಗಿಯುತ್ತೆ ವಿಧಿಯ ಬೈಯುತ್ತೆ ತನ್ನನೇ ತಾಂ ಹಳಿಯುತ್ತೆ ಶಪಿಸುತ್ತೆ ವಿಲಪಿಸುತ್ತೊಡನೊಡನೆ ವಿಜನವಾದಡವಿಯೊಳ್ ತನ್ನ ಮಡದಿಯಂ ಬಿಡಲಾರದೆಯೆ ಮತ್ತವಳನೊಡಗೂಡಿ ಕರೆದೊಯ್ಯಲಾರದೆಯೆ ಚಲಿತನಾರ್ದಂ ಬಿರುಗಾಳಿಯೊಳ್ ತೂರಿರ್ದ ತರಗೆಲೆಯ ತೆರದಿ. ಏನಾದರೇನಸ್ತಮಾನಕೆ ಸರಿವ ರವಿಯು ತಾಂ ತಡೆಯಬಲ್ಲನೆ ತನ್ನ ಗತಿಯಂ ಮೇಣ್ ನಿಯತಿಯಾನೀತಿಯಂ? ನಳನುಮಂತೆಯೆ ತನ್ನವಿೂರ್ದಾಶಕ್ತಿ ತಾಂ ದೂಡುತಿರೆ ದುರ್ಗತಿಗೆ ತೊರೆವನಲ್ಲದೆ ಸುದತಿಯಂ ಮೇಣ್ ಧರ್ಮ ಪತ್ನಿಯಂ ವಿೂರ್ವನೇ ತನ್ನವನತಿಯಗತಿಯಂ? ತಾಳಲಾರದ ತಾಪದೊಳ್ ನಳನೃಪಂ ನಿಲ್ಲಲಾರದೆ ಮುಂದೆ ತನ್ನಾಕೆಯಂ ಬಿಟ್ಟಗಲಿ ಪೋಗಲೊಲ್ಲದ ಮನದಿ ನಡುಗಿದಂ ತರಹರಿಸಿ ಮಡದಿಯಂ ಮೇಣರ್ಭಕರ ಜನನಿಯಂ ನೋಡಿ ನೋಡಿ ಮೆಲ್ಲಮೆಲ್ಲನೆ ತಿರುಗಿ ಮೆಲ್ಲಡಿಯ ಮುಂದಿಟ್ಟು ನಿಲ್ಲುತಲ್ಲಿಯೆ ತನ್ನ ವಲ್ಲಭೆಯ ತಿರುಗುತೀಕ್ಷಿಸುತೆ ಕೈಕಾಲು ಮುಖಗಳೆಲ್ಲವಂ ದಿಟ್ಟಿಸುತೆ ತಿರುಗುತ್ತೆ ಕಾಲ್ತೆಗೆದು ಮರುಗುತ್ತಮಂತೆ ಪಿಂತಿರುಗಿ ನೋಡನೋಡುತ್ತೆ ಕಾಡುತಿಹ ವಿಧಿಯು ತಾಂ ದೂಡುತಿರೆ ಭರದಿ ಭೂಪಾಲಕಂ ಕಾಡಿನೊಳ್ ಕಾಣದಾದಂ ಕಾಯಮಂ ಬಿಟ್ಟಗಲಿ ನಡೆವ ಜೀವಾತ್ಮನೊಲ್. ನಳನೃಪಂ ನಡೆದಿರ್ದನತ್ತಲಿತ್ತಂ. ಮಲಗಿ ನಿದ್ರಿಸುತಿರ್ದಾತನ

ರ್ಧಾಂಗಿಯುಂ ಕತ್ತಲೆಯ ಕರಿ ಮುಸುಕಿನಿಂ ಮುಚ್ಚುತೆಚ್ಚರಿಸದಿರ್ದತ್ತ ಸಾರ್ದಂ ದಿನಪ ತಾಂ ಪಡುಗಡಲ ಮಡುವಿನೊಳ್ ಮಾಯವಾಗಿ.

ಇಂತಾದೊಡೇನರಸಿ ತಾನರಿದಿರ್ದಳೇಂ ಸರಿದಿರ್ದ ತನ್ನರಸನಂ? ಮುಳುಗಿರ್ದ ಸೂರ್ಯನಂ ತಿಳಿವಳೇಂ? ಕವಿದಿರ್ದ ಕತ್ತಲೆಯನಂತೆಯೆ ಕತ್ತಲೆಯ ಬಾಳಿನೊಳ್ ಕಳೆದಿರ್ದ ಕಕ್ಕಡವನುಂ?

ನಿದ್ರೆ ತಾಂ ಕಾರುಣ್ಯದಿಂದದುಮಿ ಹಿಡಿದಿರ್ದಳಾ ಸುದತಿಯುಂ ಕಾನನದಿ ಕಾರಿರುಳ ಬನ್ನಮಂ ತಾನೊರ್ವಳೇ ತಾಳಲಾರಳು ಕಾಂತೆಯೆಂದು. ನಿದ್ರಿಸುತೆ ಬಿದ್ದಿರ್ದಳಲ್ಲಿ ದಮಯಂತಿ ತಾಂ ಲುಪ್ತಚೇತನ ಸಮಾಧಿಯೊಳ್ ಸಂಕ್ಷಿಪ್ತ ಸಾವಿನೊಲ್ ನಿಷಧಾಧಿಪನ ಸೌಭಾಗ್ಯದೇವತೆಯ ಸಿರಿಮುಡಿಯ ಮೇಲಿಂದೆ ತೆಗೆದೆಸೆದ ಪೂದಂಡೆಯಂತೆ.

ನಿಮಿಷ ನಿಮಿಷಂಗಳಂ ತಳ್ಳುತಾಚೆಗೆ ಸರಿಯುತಿರ್ದುದು ರಾತ್ರಿ ಕಳೆದಿರ್ದ ನೂರಾರು ರಾತ್ರಿಗಳ ತೆರದಿ. ಒಂದೆರಡು ಮೂರ್ ನಾಲ್ಕರೆಣಿಕೆಯೊಳ್ ಝಾವಗಳ್ ಮಗುಚಿಬರೆ ಮುಂಜಾವಿನೊಳ್ ಮೂಡುಕಡೆ ಕೆಂಪಾಯ್ತು ಗಗನಂ. ಮಗುಚದೊಂದೇ ಮಗ್ಗುಲೊಳ್ ಮಲಗಿರ್ದ ಸುದತಿಗಿನ್ನುಂ ಮೈ ತಿಳಿಯದಿರ್ದೊಡಂ ಪ್ರಾಚೀನಿತಂಬಿನಿಯು ಸ್ವಾಗತಕೆ ಸೈಗುಟ್ಟೆ ಸಪ್ತಾಶ್ವ ತಾನೆದ್ದು ಮೇಲೇರಿ ಬಂದಂ ಖಗತತಿಯು ಮೆಲ್ಲುಲಿಯ ನಾಲಿಸುತ್ತೆ.

ವಾರಿಜಾಪ್ತನ ತೇಜದೊಳ್ ಹೊಂಬಿಸಿಲು ಹರಡುತಿರೆ ಹುಟ್ಟಳಿದು ಹಾರುತಿರ್ದೊಂದು ಮರಿದುಂಬಿ ತಾನೈತಂದು ಮೊಗದಾವರೆಯ ಮೇಲ್ ಕಾಲೂರಲಾಕ್ಷಣದಿ ಛಟ್ಟನೆ ಚಿಗಿದೆದ್ದು ನೋಳ್ಪಳೇನಂ ನಳನರಸಿ? ದಮಯಂತಿ ತಾಂ ಕಣ್ಣರಳಿಸುತೆ ನೋಡುತಾ ತಾಣಮಂ ಮತ್ತೆ ಪರಿಕಿಸುತೆ ಕಾಲಮಂ ತಾಳಿದಚ್ಚರಿಯೊಳೇ ಭಯಗೊಂಡು ಕತ್ತರಿಸಿ ಮತ್ತರಸಿ ದಳ್ ಮಲಗಿರ್ದ ಪತಿದೇವನಂ. ಏಳುತಲ್ಲಿಂ ನಿಂದು ನಿರುಕಿಸುತೆ ನೋಡಿದಳ್ ಮಂದಿರದಿ ನಾಲ್ದೆಸೆಯ ಮೂಲೆ ಮೂಲೆಯೊಳೆಲ್ಲಿಯುಂ ಕಾಣದಿರೆ ನಲ್ಲನಂ ಭೀತಿಯೊಳಗಲ್ಲಲ್ಲಿ ತಿರುಗಾಡಿ ನೋಡಿದಳ್ ಮರದಡಿಯ ಪೊದರೆಡೆಯ ಮೇಣ್ ಬಳ್ಳಿಯಾ ತೂಗುಯ್ಯಲೆಯ ಬಳಿಯು. ಸಿಡಿಲೆರಗಿದಂತಾಯ್ತು ಬಾಲೆಯಾ ಕರಣಂಗಳರಿಯದಾದುವು. ಮತ್ತೆ ರೋದಿಸುತೆ

ಬಿದ್ದಲ್ಲಿ ಹೊರಳಿದಳ್ ಮತ್ತೊರಲಿದಳ್ ಘೋಳಿಟ್ಟು ಕಾಂತನಂ ಕರೆ ಕರೆದು ಮರುಗಿದಳ್ ಮಾರ್ದನಿಗೆ ಕಾನನಂ ಕರಗುವಂತೆ: "ನನ್ನೆದೆಯ ನರಳಿಸುವ ಚಂದಿರನೆ, ಓ ನನ್ನ ಹೃದಯೇಶ್ವರ, ಓ ಎನ್ನ ಮನದನ್ನ ನಿನ್ನ ದೇಹದೊಳರ್ಧಮಂ ಬಿಟ್ಟೆಲ್ಲಿ ನಡೆದಿರ್ಪೆಯೋ ಕಾಣೆನಲ್ಲ. ನಿನ್ನ ಸನ್ನಿಧಿಯೊಳನವರತನಾನಿರ್ದು ನಿನ್ನ ಸಿರಿಯಡಿಯ ಸೇವೆಯೊಳ್ ನನ್ನಾಯುಮಂ ಕಳೆವೆನೆಂಬಾಸೆಯೊಳ್ ಕಾದಿರ್ದೆ ಕಾಂತ. ಎಲ್ಲಿರ್ಪೆನೀಂ? ವಿಜನವಿಪಿನದೊಳೆಲ್ಲಿ ನುತ್ತಾವತಾಣದಲಿ ನಾಂ ಕಾಣದಂದದಲಿ ಕುಳಿತೆನ್ನ ಪರಿಕಿಸುತಲಿರ್ಪೆ? ಬಾ ಎನ್ನ ಪತಿದೇವ ಬಾರೆನ್ನ ಪ್ರಾಣೇಶ್ವರ. ಬಾ ಬಂದೆನಗೆ ಮೊಗದೋರು, ನನ್ನೆದೆಗೆ ಸಂತಸವ ಬೀರು ಬಾ. ಬೇಸರವೆ ಕಾಂತ? ಮತ್ತೇನು ಮುನಿಸೇ? ನಿಂದಲ್ಲಿ, ನಡೆದಲ್ಲಿ, ನುಡಿದಲ್ಲಿ ಮತ್ತೆಲ್ಲಿ ನಾನರಿಯೆ ನಾಥ; ತಿಳಿಯದಿರ್ದಾವುದಾದರಪರಾಧಮೆನ್ನಿಂದೆ ಬಂದಿರ್ಪುದೆ? ಇರ್ದರೆನ್ನಂ ತಿಳಿಯಹೇಳುತೆ ತಿದ್ದಿ ನಡೆಯಿಸುತೆ ನನ್ನ ನೊಲ್ದಿನಿತು ದಿನಪೊರೆದಿರ್ದು ಮತ್ತಾವ ಗುರುತರದ ದ್ರೋಹಕೆನ್ನಂ ಬಿಟ್ಟು ಕಗ್ಗಾಡಿನೊಳ್ ನೀನೊಂಟಿಯಾಗುತಲೆಲ್ಲಿ ನಡೆಯುತಲೆಯುತಲಿರ್ಪೆ? ಮನ್ನಿಸುತಲೆನ್ನನುಂ ಕರೆದೊಯ್ಯಬಾರದೆ? ಭಾರವಾದೆನೆ ನಾನು? ಹಾಯ್ ಚಕ್ರೇಶ್ವರ, ನೀನೆಂತು ಬಳಲುತಿರ್ಪೆ? ಮತ್ತೆಲ್ಲಿ ತೊಳಲುತಿರ್ಪೆ? ನೂರಾರು ದಾಸದಾಸಿಯರಿರ್ದು ಸಂತಸದಿ ಸೇವೆಗೈದಿರ್ದೊಡೇಂ? ಸಿರಿಯಳಿದು ಕಾಡಸೇರಿರ್ದಂದು ಕೈಹಿಡಿದ ನಾನೊರ್ವೆ ಬಳಿಯೊಳೇ ಬಂದಿರ್ದೆ. ಮತ್ತಿದೇಂ ನನ್ನನುಂ ಬೇರಾಗಿಸಿತೆ ವಿಧಿಯು ಪ್ರಾಣೇಶ್ವರ! ಮುಂದೇನು ಗತಿ! ಕಾನನದ ಹುಲಿಕರಡಿಗಳ ಸಹವಾಸದೊಳ್ ಕಾಲಮಂ ಕಳೆದಪುದೆ? ಹೆಣ್ಣಲ್ಲವೇ ನಾಂ? ಶಿವನೇ! ಅರಮನೆಯೊಳೆನಿತೆನಿತೋ ಭೋಗಭಾಗ್ಯಂಗಳಿರ್ದುದಂ ತೊರೆದೆದ್ದು ಬಂದಾಗ ನಮ್ಮ ದುರ್ದಶೆಯನಾಂ ಹಳಿದಿರ್ದೆನೇ? ಮೇಣ್ ನನಗಾಗಿ ನಾಂ ಮರುಗಿರ್ದೆನೆ? ನಶ್ವರದ ಸುಖಸಾಧನಂಗಳಂ ಬಯಸಿರ್ದೆನೆ? ವಿಧಾತಾ! ಪ್ರಾಣೇಶ್ವರನ ಪಾದಸಾನ್ನಿಧ್ಯವೊಂದನೇ ನಂಬಿಬಂದಿರ್ದೆ.ಬಯಸಿರ್ದ ಸುಖಮೆಲ್ಲಮಂ ಮೇಣದರೊಳೇ ಕಂಡಿರ್ದೆ; ನಾಂ ಪಡೆದಿರ್ದೆ. ಆದೊಡೇಂ; ಕಡೆಗಿಂದು ಪತಿಪ್ರೇಮಕುಂ ಬಾಹಿರಳ್ ನಾನಾದೆನೇ? ಪ್ರಾಣೇಶ್ವರಂ ತೊರೆದನೇ. ಹಾಯ್ ಹತಭಾಗ್ಯೆನಾಂ" ವಿಲಪಿ

ಸುತ್ತಿಂತಡವಿಯೊಳ್ ನಳನರಸಿ ತಾನಿಂತು ಮೈಮರೆತು ರೋದಿಸುತೆ ದುಗುಡಭಾರದಿ ಬಿದ್ದಳಲ್ಲಿಯೆ ಮೂರ್ಛೆಯೊಳ್ ಬೇರ್ಕಡಿದ ಬಾಳೆಯಾ ಗಿಡದ ತೆರದಿ.

ಬಿರಿದಿರ್ದ ತರತರದ ಪೂವುಗಳ ಮಕರಂದಮಂ ಪೀರಿರ್ದ ತುಂಬಿಗಳ್, ಮಾಗಿದ್ದ ವಿಧವಿಧದ ಪಣ್ಗಳಂ ಮೆದ್ದಿರ್ದ ಪಕ್ಷಿಗಳ್, ಮೇವುಂಡು ತಣಿದಿರ್ದ ನೂರಾರು ವನಮೃಗಂಗಳ್ ಮತ್ತೆನಿತೆನಿತೋ ಪ್ರಾಣಿಗಳ್ ಮೇಣವುಗಳಾ ಸಂತಸದ ಸೊಲ್ಲುಗಳ್ ಕಾನನದ ಸಿರಿಯ ಸಾಮ್ರಾಜ್ಯದಾನಂದಮಂ ವರ್ಧಿಸುತ್ತಡವಿಯೊಳ್ ತಂಗಾಳಿಯೊಡಗೂಡಿ ಶಾಂತತೆಯ ತೋಷಮಂ ಸಾರಿರ್ದೊಡಂ ಕೇಳ್ವರಾರುಂಟು? ಮರದಡಿಯ ಪೊದರ ಮೇಲುರುಳಿ ಬಿದ್ದಿರ್ದ ದಮಯಂತಿಯಂ ಮೇಣವಳ ಬನ್ನಮಂ ನೋಳ್ಪರಾರುಂಟು ನಿರ್ಜನಾರಣ್ಯದೊಳ್, ಕೈಪಿಡಿದು ವರಿಸಿರ್ದ ಪತಿಯೆ ತಾಂ ಬಿಟ್ಟಗಲಿ ನಡೆದಿರ್ದ ಮೇಲೆ? ಬೆಂಗದಿರ ಕಾಯ್ಪು ಬಲವಾಗಲನ್ನೆಗಂ ನಳನಂಗನೆಯು ತಾಂ ತಿಳಿಯುತೆಚ್ಚತ್ತು ತನ್ನಿನಿಯನಂ ಕಾಂಬ ತವಕದಿಂ ಸುಳಿದಾಡಿ ನೋಡಿದಳ್. ಪರಿಕಿಸುತೆ ಮುನ್ನತಾನರಸಿ ನೋಡಿರ್ದ ತಾಣಂಗಳಂ ಮತ್ತದೇ ಕಾನನದ ಜೀರ್ಣಮಂದಿರವನುಂ ಕತ್ತೆತ್ತಿ ಕಣ್ಣಾಲಿಗಳ ಹೊರಳಿಸುತೆ ಮರಳಿ ಮರಳಿ ಕಾಣ್ಬಳೇನಾ ಕಾಂತೆ? ತಾನಲೆವ ಕಾಡಲ್ಲದೆಯೆ ಕಾಡಿನಾ ಹಿರಿಕಿರಿಯ ಜಂತುಗಳನಲ್ಲದೆಯೆ ನೋಳ್ಪಳೆಂತಾಕೆ ತನ್ನರಸನಂ ಕಳೆದಿರುಳಮುನ್ನಮೇ ಬೈಗಿನೊಳ್ ಮತ್ತೆತ್ತಲೋ ಗಮಿಸಿರ್ದ ನಿಷಧೇಶನಂ ಪುಡುಕುತ್ತೆ ಕಾಣದಿರೆ ಪತಿದೇವನಂ ದುಃಖಿಸುತೆ ಸೆರಗನೆಳೆದೆಳೆದು ಕಣ್ಣೊರಸಿಕೊಳುವನಿತರೊಳ್ ತಿಳಿದಳಾ ತರುಣಿ ತಾಂ ಪತಿಗೈದ ಕೃತ್ಯಮಂ– ತುಂಡಾಗೆ ಹರಿದಿರ್ದ ತನ್ನ ವಸನಮಂ. "ಕೈ ಬಿಟ್ಟನೇ ಕಾಂತನೆನ್ನಂ? ತೊರೆದನೇ ಎನ್ನರಸನೆನ್ನಂ? ಮರೆದನೇ ಪ್ರಾಣೇಶ್ವರಂ? ಹಾ ಕೆಟ್ಟೆನಯ್ಯೋ ಕೆಟ್ಟೆನಾಂ" ಎಂದಳುತೆ ಸುದತಿ ತಾಂ ಕಾಂತನಂ ನೆನೆನೆನೆದು ಕೊರಗಿದಳ್. "ಹೃದಯೇಶ್ವರ! ಕಾಂಬುದಿನ್ನೆಂದಿಗೋ ನಾಂ ನಿನ್ನ ಮೊಗದಿಂದುವಂ ಮೇಣಧರ ಮಂದಹಾಸದ ಜೊನ್ನಮಂ? ನಿನ್ನ ಸಿರಿಪಾದಪದ್ಮಂಗಳಂ ಮುಡಿಯೊಳಾನುವ ಭಾಗ್ಯಮಿನ್ನೆಂದಿಗೋ? ಮುಂದೆ ಎಂದಾದರೊಂದು ದಿನ

ಬಂದಪುದೆ? ಮೇಣ್ ಇಲ್ಲವಾಚಪುದೆ ಕೇಳ್ವದಾರಂ? ಪೇಳ್ವರಾರುಂಟು?
ನುಡಿವುದಾರೊಡನೆ? ಮೇಣ್ ನುಡಿವುದಾರೆನ್ನೊಡನೆ? ಹಾ ಪತಿದೇವ? ಎಲ್ಲಿ
ರ್ಪೆ? ನೀನೆಲ್ಲಿ ನಡೆದಿರ್ಪೆ? ಯಾರಮನೆಯೊಳಗೆಲ್ಲಿ ಮತ್ತಾರ ಸೇವೆಯೊಳ್
ಕಾಲಮಂ ಕಳೆಯುತಿರ್ಪೆ? ಹೇ ಕಾಂತ, ಕಾಡಾದರೇನಂತೆ? ನಿನ್ನಾಕೆ ನಿನ
ಗಾಗಿ ಕಾದಿರ್ಪಳಿಲ್ಲಿ. ಮಂಟಪವ ನೋಡಿಲ್ಲಿ; ನಮಗಾಗಿ ಕಟ್ಟಿಹರು.
ಹಾಳಾಗಿ ಬಿದ್ದಿರ್ದರೇಂ? ಬಿದ್ದ ಬಾಳಿನ ಸೊಗವ ಸೂಸುತಿದೆ, ಕೂಡಿಸಿದ
ಕೌಶಲ್ಯದೊಳ್ ಚಿತ್ತಾರದೊಂದನೊಂದಪ್ಪಿ ಬಿದ್ದಲ್ಲೆ ಬಿದ್ದು ಬಿಗುವಾದ
ತೆರದಿ. ವನದೇವಿಯೋಲೈಸಿ ನೀಡುತಿಹ ಕಾಣಿಕೆಯ ನೋಡಿದೋ! ಫಲಭಾ
ರದಿಂ ಬೀಗಿಬಗ್ಗಿರುವ ರೆಂಬೆಗಳ ಮೇಣಲ್ಲೆ ಬೆಳೆದು ಹೂಬಿಟ್ಟ ನೂರಾರು
ಬಳ್ಳಿಗಳ ಕಂಡೆಯೇಂ? ಪಿಕದುಲಿಯು ಕೇಳಿಸಿತೆ ಕಾಂತ? ಏನುಸೊಗ
ಸಿನ ಹಾಡು! ಮತ್ತದೋ ಸೇರಿಸಿತು ಮರಕುಟಿಕ ತಾಳಮಂ. ಹುಲ್ಲೆಗಳ
ನೋಡಲ್ಲಿ ಕುಣಿಕುಣಿದು ನರ್ತಿಪುದ. ಚಾಮರಂಗಳನೆತ್ತಿ ಪಿಡಿದಿರ್ಪುವೀ
ಚಮರಿಗಳ್. ಪರಿವಾರವೊಂದೊಂದೆ ಸೇರುತಿದೆ ಕಾಡಿನಾ ಮೃಗಪಕ್ಷಿ
ಗಡಣಗಳ್. ವನಲಕ್ಷ್ಮಿಕಾದಿಹಳು ನಾಥ, ಬಿರಿದ ಮಲ್ಲಿಗೆಯ ಪುಷ್ಪಾಂ
ಜಲಿಯನೆರಚಿ. ನಂದದಾಶೆಯ ಜ್ಯೋತಿಯಂ ಬೆಳಗಿಸುತೆ ನನ್ನೆದೆಯ
ಬಟ್ಟಲಲಿ ಪ್ರಾಣೇಶ್ವರ, ನಿನಗಾಗಿ ನಾನಾರತಿಯ ಪಿಡಿದು ನಿಂದಿರ್ಪೆನಲ್ಲ;
ದಯಮಾಡು ರಾಜೇಂದ್ರ! ಬಾ. ನಿಷಧೇಂದ್ರ! ಓಲಗಕೆ ಬಾ. ಬಂದೆಡರ
ಕಾಳಗಕೆ ಬಾ. ಬಾ ಬರಿದಾದ ಬಾಳ್ ಕಣಜದಲಿ ಕಾಳುಗಳ ಕೂಡಿಡಲು
ಬಾ ಬಾರೆನ್ನಪತಿದೇವ ಬಾ! ಚೆಂದಳಿರ ಹಾಸುಗಳನೊಟ್ಟಿರುವೆ ನಾಂ.
ನಿನಗಾಗಿ ಮಂದಿರದ ಬಾಗಿಲೊಳು ಕಾದಿರುವೆ ನಿನ್ನ ದರ್ಶನದ ವರ್ಷಾ
ಗಮವನೀಕ್ಷಿಸುವ ನನ್ನಮನಚಾತಕಕೆ ಹರ್ಷಮನ್ನೆರಚುತ್ತೆ ಬಾ,
ಮುಗಿಲ ಸೇರುತೆ ಬಾ, ಗಾಳಿಯೊಳು ತೂರುತ್ತೆ ಬಾ, ಬಾ! ಎನ್ನ ಜೀವ
ನವೆ ಬಾ. ಬಂದೆಯೇಂ? ಹೋ ಮೊಗಮದೇಕಿಂತು ಕಪ್ಪಾಯ್ತು ಕಾಂತ?
ಬಳಲ್ಕೆಯಿಂ ಕಂದಿರ್ಪುದೇ? ದುಗುಡಮಾವರಿಸಿರ್ಪುದೇ? ಮೇಣೆನ್ನ
ವಿರಹಮೇ? ಮನ್ನಿಸೆನ್ನಂ ಪ್ರಿಯಕರ! ಮೌನಮೇತಕೆ ಪೇಳು. ಮಾತಾಡು
ಹೃದಯೇಶ್ವರ. ಮನಮಿಲ್ಲಮೇ? ನಾಂ ಬೇಡಾದೆನೆ? ನುಡಿ, ನುಡಿಯಿಸೆಲೆ
ನಾಥ. ಹಾ! ದೀನೆಯಾಂ ದರಿದ್ರೆಯಾಂ ಎಲ್ಲಿರ್ಪನೆನ್ನವಲ್ಲಭಂ! ಅಯ್ಯೋ

ಬರಲಾರನೇಂ? ಪತಿದೇವ, ಬರಲೊಲ್ಲೆಯೇಂ? ನಿನ್ನನಲ್ಲಿಯುಂ ನೀನೊಲ್ಲೆಯೆಂ ಹಾ! ಹಾ! ವಿಧಿಯೇ!"

ಎಂದೆನುತೆ ಶೋಕದುದ್ಗಾರದೊಳ್ ರೋದಿಸುತೆ ಮನಕೆ ಬಂದಂದದೊಳ್ ನುಡಿದು ಚೀರುತ್ತೆ ಹಾರುತೋಡುತೆ ಗಹ್ವರದೊಳೆಲ್ಲಿಯೋ ದಿಟ್ಟಿ ಪಥಗತಿಗಳೊಂದನುಂ ಲೆಕ್ಕಿಸದೆ ಪಾಯ್ದೋಡಿದಳ್ ಪತಿಪಾದಮಂ ಸೇರ್ವೆನೆಂದು.

ಬಿಚ್ಚಿರ್ದ ಮುಡಿಯು ಕೆದರಿರ್ದ ಕೇಶಂಗಳಿಂ ಪತಿಯನಗಲಿರ್ದ ಸಂಕಟದಿ ಸೊರಗಿರ್ದವದನದಿಂ ಅತ್ತತ್ತು ಕಂಬನಿಯೊಳದ್ದಿ ಬೀಗಿರ್ದ ನಯನಂಗಳಿಂ ಕಣ್ಣೀರಧಾರೆಯೊಳಸೇರಿರ್ದ ನಾಸಿಕದ ನೀರಿನಿಂ ಮತ್ತ ದರನೊರಸುತುಜ್ಜುತೆ ತನ್ನ ಧೂಳಿಡಿದ ಕೈಗಳಿಂ ಕೆಂಪಡರ್ದಾನನದಿ ಹೊರಹೊಮ್ಮುತಿಹ ಕರುಣ ಭೀಕರ ಭಾವದಿಂ ಹರಿದಿರ್ದ ಸೀರೆಯೊಳ್ ಅರೆಯಾಗಿ ಮುಚ್ಚಿರ್ದ ಮಾನದಿಂ ನೊಂದು ಬೆಂದಿರ್ದೊಡಲಿನಂತರ್ವ್ಯಧಿಂ ಬಿಗಿದಿರ್ದ ಕಂಠದಿಂದೇಳ್ವಾರ್ತನಾದಂಗಳಿಂ ಹಾರುತೋಡುತೆ ನಿತ್ತು ತಿರುಗುತರಸುತ್ತೆ ನಡೆಯುತಿರ್ದಳು ಸತಿಯು ವಿರಹದುನ್ಮಾದಿನಿಯ ಪೋಲ್ವು.

ನಿಂದಲ್ಲಿ ನಿಲ್ಲದೆಯೆ ನಿಜಪತಿಯನೆಲ್ಲಿಯುಂ ಕಾಣದೆಯೆ ಸುದತಿ ತಾಂ ಮುಂದು ಮುಂದಕೆ ಕಾಡಿನೊಳ್ ನಡೆಯುತಿರಲನ್ನೆಗಂ ಸಿರಿಯು ನೆಲ್ಲವಕೊಂಡು ಸತಿಪತಿಯರಂ ಬೇರಾಗಿಸಿದ ಕಣ್ಗೆ ಕಾಣಿಸದ ವಿಧಿಯು ತಾಂ ಬೆನ್ನಹಿಂದೆಯೆ ಬಂದು ಕತ್ತಿನೊಳ್ಕೈಯಿಕ್ಕಿ ನೂಂಕಿದಂದದಲಿ ಪುತ್ತನಾವರಿಸಿ ಮೆತ್ತಿಕೊಂಡಿರ್ದೊಂದು ಮೃತ್ಯುವಿನಗಂಟಲಬಿಲದಿ ಕಾಲಿಕ್ಕಿಕುಕ್ಕರಿಸಿ ದಿಂಡುರುಳಿಬಿದ್ದಳಾ ಭಾಗ್ಯನಿಧಿ ನಳನೃಪನ ಸೌಭಾಗ್ಯದರಸಿ. ಅನಿತರೊಳ್ ಬಿಲದಬಾಗಿಲೊಳಲ್ಲೆ ಮಲಗಿ ಕಾದಿರ್ದೊಂದು ಪೆರ್ಬಾವು ಬಾಯ್ತೆರೆದು ಭಕ್ಷಿಸಲ್ ತೊಡಗಿತಾ ನೃಪರಾಜ್ಞಿಯಂ ಮತ್ತವಳ ಪಾದಂಗಳಂ ಪಿಡಿದು ನುಂಗಿ. ಏನು ಭವಭವದ ಪ್ರಾಚೀನ ಕರ್ಮದ ಫಲವೋ? ಮತ್ತೇನು ಬವಣೆಯೋ? ಪಾಪ, ಚಂದ್ರವಂಶೋದ್ಭವನ ಕೈಪಿಡಿದು ಕಾಲ ರಾಹುವ ಬಾಯ್ಗೆ ತುತ್ತಾದ ತೆರದಿಂದೆ ಚಂದ್ರಮುಖಿ ದಮಯಂತಿ ತಾಂ ಬಿದ್ದಳಯ್ಯೊ ಪೆರ್ಬಾವಿನಾ ಬಾಯ ಬಿಲದಿ. ಕಾಂತನಂ ಕಾಣದಿಹ ಕಳ

ವಳದಿ ಕಂಗೆಟ್ಟು ಕಾಂತೆತಾಂ ಪಡೆದಿರ್ದಳಿನ್ನೊಂದು ದುರ್ದೆಸೆಯ ಸಂಕಟವನೇನೆಂಬೆ ನೊಂದೆದೆಗೆ ಬರೆಗೊಳ್ವ ತೆರದಿ. ಬಿಡಿಸಿಕೊಂಬಳೆ ತನ್ನತಾಂ ಜವನ ದವಡೆಯೊಳಿರ್ದು? ನಿಂತಳಂತೆಯೆ ತಾನು ನುಂಗುತಿರೆ ಪೆರ್ಬಾವು ತನ್ನಂ. ಮೃತ್ಯು ತಾಂ ತನ್ನ ಬಾಯೊಳಗಿಟ್ಟು ನೊಣೆಯುತಿರೆ ಮಾಳ್ಪುಳೇನಂ? ಸುದತಿ ಬೊಬ್ಬಿರಿದು ಚೀರ್ವುದಲ್ಲದೆಯೆ ಪರಿಹರಕೆ ಮಾರ್ಗಮಂ ಕಾಣ್ಬಳೇ? ಕೇಳ್ವರಾರಾ ಕಾಡಿನೊಳ್ ಶೋಕಾರ್ತೆಯಂ ಮೇಣ್ ದುರ್ಮರಣ ಸನ್ನಿಹಿತ ಸಂಪ್ರಾಪ್ತೆಯಂ? ತಾಳಲಾರದೆ ವ್ಯಥೆಯನಾ ತರುಣಿತಾಂ ಬೊಬ್ಬಿರಿದು ಕೂಗುತಾರನೋ ಕರೆಕರೆದು ಮೊರೆಯಿಟ್ಟು ಕಾಂತನಂ ನೆನೆನೆನೆದು ಮತ್ತವನ ದುರ್ದೆಸೆಯನೆಣಿಸುತ್ತೆ ಘೋಳಿಟ್ಟು ಮರುಗುತ್ತೆ ತನ್ನಿರಕೆ ಸಾವುದೇ ಸರಿಯೆಂದು ನಂಬಿರ್ದೊಡಂ ಸಾವಿಗುಂ ಮುನ್ನ ತಾನನುಭವಿಪ ನೋವಿದೇಂ? ಪ್ರಾಪ್ತಿಸಿದ ದುರ್ಮರಣಮೇಂ ಸೈಸಲಪ್ಪುದೇ? ಸಾಧ್ಯಮೇ ಸಾಧ್ವಿಗಾಸತಿಶಿರೋಮಣಿಗೆ? ಹಾ! ಎಂದು ರೋದಿಸುತೆ ಮತ್ತೆಡೆಬಿಡದೆ ಬೇಡಿದಳ್ ಮೃಡನ ನೆನೆದು "ಶಿವ ಶಿವಾ ರಕ್ಷಿಸೆನ್ನಂ. ಶಂಕರಾ, ಕಾಳಾಹಿಭೂಷಣನೆ ಕಲ್ಪಾಂತಕಾಲನೇ! ಹೇ ಮೃತ್ಯುಂಜಯನೇ, ಸಹಿಸಲಾರೆನು ದೇವ. ಎಳೆದೆಳೆದು ನರನಾಡಿಗಳ ಪೀಡಿಪುದು ಪೆರ್ಬಾವು. ಬಿಗಿದುಬರುತಿದೆ ಕೊರಳು. ಉಸಿರಾಡಲಾರೆನಯ್ಯೋ ಜಗದೀಶ್ವರ. ಪತಿದೇವನಂ ಬಳಿವಿಡಿದು ಪ್ರಾಣೇಶ್ವರನ ಪಾದಸೇವೆಯೊಳೆ ದಿನಗಳೆದು ಮತ್ತದೇ ಪದತಳದೊಳೆನ್ನಸುವ ನೀಗುತಾಂ ಜೀವನದ ಸಾರ್ಥಕತೆಯ ಪಡೆವನೆಂಬಾಶೆಯೊಳು ಕೂಡಿರ್ದೆ ಹರನೇ! ಕಡೆಗಿದೇಂ ದುರ್ದೆಸೆಗೆ ತುತ್ತಾದೆನಾಂ? ದುರ್ಮರಣದಿಂದಸುವ ನೀಗುವ ತೆರದಿ ವಿಧಿಸಿತೇ ನನ್ನ ಪ್ರಾರಬ್ಧ? ಶಿವನೇ! ಹೇ! ಕರುಣಾಕರ ರಕ್ಷಿಸೆನ್ನಂ. ಕಾಲಪಾಶವಿ ಬಿಗಿದು ದಂಡದಿಂ ಬಡಿದು ಮೃಕಂಡು ಮುನಿ ಪುತ್ರನಂ ಜವನು ಜಗ್ಗಿತೆಳೆಯುತಿರೆ ಅಂತಕಾಂತಕನಾಗ-ತಾತನಂ ಪೊರೆದಿರ್ದೆ. ಕ್ಷೀರಾಬ್ಧಿಮಥನದೊಳ್ ವಾಸುಕಿಯು ಕಾರಿರ್ದ ಗರಳಮಂ ಪೀರಿರ್ದು ಘೋರ ವಿಷದುರಿಯ ಬಾಧೆಯಿಂ ಕಂಗೆಟ್ಟ ಲೋಕಂಗಳಂ ಕಾಯ್ದಿರ್ದೆ. ಕಾಮನಂ ಸುಟ್ಟುರುಹಿ ಗಿರಿಜೆಗಾ ಶಾಶ್ವತದ ಪ್ರೇಮವನ್ನೊಲಿದಿತ್ತು ಕುಮಾರನಂ ಪಡೆದು ಮತ್ತವನ ಮುಖದಿಂದೆ ತಾರಕನ ಸಂಹರಿಸಿ

ದೇವರ್ಕಳಂ ಪಾಲಿಸಿದೆ. ಹಾಯ್ ಸರ್ವೇಶ್ವರ! ಮೃತ್ಯು ಭಯದಿಂದೆ ತತ್ತರಿಪ ದೀನೆಯಂ, ನಿನ್ನನೇ ನಂಬಿರ್ಪ ನಳನೃಪಾಲನ ಚರಣದಾಸಿಯಂ ಕಾಯಲಾರೆಯ ಶಿವನೇ? ಅಪರಾಧಮೇನಿರ್ದರೂ ಮನ್ನಿಸುತಲೆನ್ನನೀ ದುರ್ಮರಣದಿಂದುದ್ಧಾರಗೆಯ್ಯೊ ವಿಭುವೆ ಹಾಯ್! ಶಂಕರಾ!"

ಸರ್ವಭೂತಹಿತನಾ ಭೂತನಾಥಂ ಕೇಳ್ದನಾಹುಯ್ಯಲಿಟ್ಟಳುತಿರ್ಪರೋದನವನಂತೆನೆ ಮಿಗಬೇಂಟೆಗಾ ಕಾಡಿನೊಳ್ ಸುತ್ತುತಿರ್ದೊರ್ವ ವ್ಯಾಧತಾಂ ಬಂದನಾಕ್ಷಣದೊಳಾಲಿಸುತೆ ಶೋಕಾರ್ತಧ್ವನಿಯನವಲೋಕಿಸುತೆ ದೃಶ್ಯಮಂ ಕೈಯ್ಯ ಕತ್ತಿಯನೆಳೆದು ಬೀಸುತಿಕ್ಕಡಿಯಾಗೆ ಕಡಿದಿಕ್ಕಿದಂ ಪೆರ್ಬಾವನು. ಮೃತ್ಯು ಬಂಧನದಿಂದೆ ಪಾರಾದ ದಮಯಂತಿ ತಾಂ ತ್ರಿಪುರಾಂತಕನ ನೆನೆಯುತೀ ವ್ಯಾಧನಂ ವಂದಿಸುತೆ ಕೊಂಡಾಡಿದಳ್ ಹರನನಂತೆಯೆ ನಿಷಾದನಂ. ಹಿಗ್ಗಿದಂ ಹೊಗಳಿಕೆಗೆ ಕಿವಿಯಿತ್ತು. ಶಬರ ತಾಂ ಪರಿಚಯಕೆ ಮನಮಾಡಿ ರಕ್ಷಕಂ ತಾನೆಂಬ ಹಮ್ಮಿಂದೆ ಕೇಳಿದಂ ಮತ್ತವಳ ವೃತ್ತಾಂತವಂ, ಮನದ ಕೌತೂಹಲಕೆ ಮಾತಿನಾಕಾರುಣ್ಯಮಂಬೆರಸಿ. ನುಡಿದಳೆಲ್ಲವನೆಡೆಬಿಡದೆ ನಡೆದುದಂ. ಮತ್ತೊಡನೆ ಬೇಡಿದಳ್ ಸಾಧ್ವಿ ತಾಂ ಬೇಡನೊಳ್ ಕುಂಡಿನಾಪುರಕೆ ದಾರಿಯಂ ತೋರ್ಪುದೆಂದು. ಕೇಳುತಾ ಮಾತುಗಳನುತ್ಸಾಹದಿಂ ನಲವಾಂತು ಕನಿಕರವ ತೋರುತವಳಂ ತೋಷಿಸಲು ಧೈರ್ಯವನ್ನೊರೆಯುತ್ತೆ ರಕ್ಷಿಸುತೆ ಕರದೊಯ್ವೆ ತಾನೆಂದು ಸಾರುತ್ತೆ ಸಂತಸದಿ ನುಡಿವುತಾ ಬಿಯದನಣಿಯಾದನಾಕೆಯನ್ನೊಡಗೊಂಡು ನಡೆಯಲಗ್ನಿಯೊಳ್ ಹೋಮಿಸಿದ ಹವಿಯ ಮೇಲಲಾಶಿಸಿದ ಸಣ್ಣಿರುವೆಗಳ ತೆರದಿ; ಮೇಣ್ ಕೋಪೆಯೊಳ್ ಕರಗಿ ನೀರಾಗಿ ಕೆಂಪಾದ ಕಾಂಚನವ ಕುಡಿಯಲಾತುರದೊಳಣಿಯಾದ ತೃಷಿತನಂ ಪೋಲ್ದು. ನಡೆಯೆಂದು ಬಿನ್ನೈಸಿ ದಮಯಂತಿಯಂ ಮುನ್ನಡೆಸಿ ತಾನೊಡನೆ ಬೆನ್ನಹಿಂದೆಯೆ ನಡೆದು ಕಾಡಿನೊಳ್ ಬಳಸುತ್ತೆ ದಾರಿಯಂ ತೋರುತ್ತೆ ನಡೆದಪಂ ಬೇಡರವಂ ಬೇಕುಬೇಕೆಂಬಾವುದೋ ಬೇರೊಂದು ಪ್ರತ್ಯಾಶೆತಾಂ ಸೆಳೆಯುತಿರಲು. ಬಯಕೆದಿಟ್ಟಿಯ ಬೀರುತಲ್ಲಲ್ಲಿ ಸುದತಿಯಂ ಧೃಷ್ಟಿಸುತೆ ಮತ್ತವಳ ಸೌಂದರ್ಯಮಂ ಕಣ್ಣಿನೊಳೆ ಹೀರುತ್ತೆ ಮನದೊಳಗೆ ಹಿಗ್ಗುತ್ತೆ ನಡೆಯುತಿರ್ದಂ ಸ್ವರ್ಗಸೋಪಾನದೊಳ್

ಮೇಲೇರಿ ನಡೆದಪೆಂ ತಾನೆಂಬ ಭ್ರಾಂತಿಯಿಂ. ಮೈಯೆಲ್ಲ ಕಣ್ಣಾಗಿ ಹರಿಣಿಯಂತಡಿಗಡಿಗೆ ಕೊರಳ ತಿರುಗಿಸುತೆ ಹಿಂದಿರ್ದವಂ ಪರಪುರುಷನೆಂದೆಂಬ ತಿಳಿವಿನಿಂ ಕೂಡಿರ್ದ ಜತನದಿಂ ತನ್ನಿರದ ಸ್ಥಿರತೆಯೊಳ್ ಮೇಣ್ ಗಾಂಭೀರ್ಯ ಮೌನದೊಳ್ ನಡೆಯುತಿರ್ದಾಕೆಯಂ ನೋಡನೋಡುತೆ ಮನದಳೇನೇನೊ ನೆನೆದು ಬಳಲಿದಂ. ಚೆಲ್ವಿಕೆಯ ನೋಡಿ ನೋಡಿ ಸುರಪುರದಿ ರಂಭಾದಿ ದಿವಿಜನಾರಿಯರ ಸೌಂದರ್ಯಸುಖಾಸ್ವಾದನೆಯೊಳೋಲಗಂಕುಡುವ ಬಿಡುಗಣ್ಣರೊಡೆಯನಾ ಪುಲೋಮಜೆಯ ವಲ್ಲಭಂ ತಾನೆ ಸೋತಿಳೆಗಿಳಿದು ಭ್ರಮೆಗೊಂಡನೆನೆ ಆ ರೂಪರಾಶಿಯ ಮುಂದೆ ಕಾಡಬೇಡನ ಪಾಡದೇಂ? ಬಾಡಿದಂ ಮದನಾಗ್ನಿಬಾಧೆಯಿಂದೆ. ಅಲ್ಲಲ್ಲಿ ಹರಿದಿರ್ದ ಸೀರೆಯೊಳ್ ತನುಕಾಂತಿಹೊಮ್ಮುತಿರೆ ಮನದಣಿಯೆ ಸೊಬಗನೀಕ್ಷಿಸುತೆ ಮತ್ತದೇ ಸೌಂದರ್ಯಸುರೆಯನೀಂಟುತ್ತೆ ಮರುಳಾಗಿ ಮಾನಿನಿಯ ಕುರಿತಾಡಿದಂ ಮತ್ತವಳ ಬೇಡಿದಂ ವ್ಯಾಧತಾಂ ಮಾರಕಭ್ರಮೆಯಿಂದೆ ಮತ್ತನಾಗಿ: "ಎಲೆಲೆ ಮನಮೋಹಿನಿಯೆ ನಿಲ್ಲಲ್ಲಿ. ನೋಡೆನ್ನ ಬಳಲಿರ್ಪ ವದನಮಂ. ನೀಡೆನಗೆ ನಿನ್ನೊಲುಮೆಯಂ. ಬೇಡುವೆಂ ನಿನ್ನ ಪದತಲದಿ ಮುಡಿಚಾಚಿ. ನೋಡಿತ್ತ ನಿನ್ನವಂ ತಾಂ. ನಿಷಧಾಧಿಪನ ರಾಣಿ ನೀನಾದೊಡೇಂ, ನಾನುಮಂತೆಯೆ ನಿಷಾದಾಧಿಪಂ". ಕೇಳ್ದೊಡನೆ ಹೌಹಾರಿ ಬೆಚ್ಚುತರೆಕ್ಷಣದಿ ಚಿತ್ತಮಂ ಸ್ಥಿರತೆಗೇರಿಸುತೆ ಮೇಣಾ ಶಬರನಂ ಪ್ರಾರ್ಥಿಸುತೆ ನುಡಿದಳಿಂತು "ವಿವೇಕಮಂ ಕಳೆಯದಿರು ಸೋದರನೆ. ಮಾನವರ ಕುಲದಿ ಜನಿಸಿರ್ದೆಮಗೆಮ್ಮ ಮಾನವೇ ಮುಖ್ಯವೆಂಬುದಂ ಮರೆಯದಿರು. ಧರ್ಮಮಂ ಕಡೆಗಣಿಸಿ ನೀತಿಯನ್ನುಳಿದಲ್ಪತನದಿಂದೆ ವರ್ತಿಪುದು ಪಶುವೃತ್ತಿಯೆಂಬುದಂ ತಿಳಿದಿಲ್ಲವೇಂ? ನಿಷಾದರವಂ. ನೀನಾದೊಡೇಂ ಪಾಪಪುಣ್ಯಕೆ ಬಾಹಿರನೆ? ಪರಸತಿಗೆ ಮನಮಾಡಿ ಪಾಪಮನ್ನಾರ್ಜಿಸುತೆ ನರಕದೊಳ್ ಬೀಳದಿರು. ನೀನೆನ್ನ ಪ್ರಾಣದಾತಂ, ಪುಣ್ಯಾತ್ಮಂ, ಒಡಹುಟ್ಟಿನಂತೆನ್ನ ರಕ್ಷಿಸಿದೆ; ಮಾನಮಂ ಕಳೆಯದಿರು. ಸತಿಯರ್ಗೆ ಪ್ರಾಣಕಿಂತಲು ಮಾನಮೇ ಮಿಗಿಲೆಂಬುದಂ ನೆನೆ. ದುರ್ಮರಣದಿಂದುದ್ಧಾರಮಂ ಗೈದು ನೀನೆನ್ನ ನೀತಿಯಂ ಪಾಳ್ಗೈಯದಿರು. ಬಡವೆ ನಾನೊರ್ವೆ. ಸತಿತನವನುಂ ಕಿತ್ತೊಗೆಯುತೆನ್ನಂ ಕೊಲ್ಲದಿರು. ನೀನುಮಂತೆಯೆ ಪರನಾರಿಯಂ ಕೆಣಕಿ

ಸಾಯದಿರು." ಕಾಮನುರುಬೆಯೊಳ್ ಸಿಲುಕಿ ಬೆಂಡಾಗಿ ಹೃದಯಮಂ ಕಳೆಯುತವಿವೇಕಿಯಾದವಂ ನ್ಯಾಯನೀತಿಗಳನೆಂತು ಕೇಳ್ದು ಬಾಳ್ವಪಂ? ಸ್ವರ್ಗೀಯಸೌಂದರ್ಯ ತಾಂ ಸೆಳೆಯುತಿರೆ ಹೃದಯಮಂ ಸೈರಣೆಗೆ ತಾವೆಲ್ಲಿ? ಮಾಸತಿಯ ರೂಪಲಾವಣ್ಯತೇಜತಾಂ ಸರ್ವಾಂಗದೊಳ್ ಹೊಳೆಯುತಿರೆ ನಿರ್ಜನಾರಣ್ಯದೊಳ್ ಮಾರನುಪಹತಿಯಿಂದೆ ಬೆಂದಿರ್ದ ಬೇಡತಾಂ ತಡೆಯಬಲ್ಲನೆ ತನ್ನೆದೆಯ ಚಾಪಲ್ಯಮಂ? ಮರುಳನೊತ್ತಾಯದಿಂದಾಕೆಯಂ ಭೋಗಿಸಲ್ಮನಸಮಾಡಿ ದರ್ಪದೊಳ್ ಬಳಿಸಾರ್ದು "ನಿನ್ನ ಧರ್ಮವೇನೆನ್ನಬಾಧಿಪುದೋ ನೋಳ್ಪೆನಾಂ. ಸುದತಿಯರ ನೀತಿ ನೆವನದಿಂ ತಾಪಕ್ಕೆ ಬೆದರಿ ಲಭಿಸಿರ್ಪ ಸುಖದ ಸಾಮ್ರಾಜ್ಯಮಂ ತೊರೆವ ಮೂಢಾತ್ಮನಾನಲ್ಲ. ನಿನ್ನಂಗಸೌಂದರ್ಯಸ್ವರ್ಗಮಂ ಬಯಸಿ ಬಂದವಗೆ ಮತ್ತದಂ ಸಾಧಿಪುದೆ ಗುರಿಯಲ್ಲಮೇಂ? ಸಾಧಿಸುತೆ ನಾಂ ಸತ್ತಮೇಲಾವ ನರಕಮೋ ಬರಲಿ, ಬೆದರೆನಾಂ. ಪೆರ್ಬಾವಿನಾಬಾಯೊಳಗೆ ಬಿದ್ದಿರ್ದ ನಿನ್ನಸುವ ರಕ್ಷಿಸಿದ ನಿನ್ನೊಡೆಯನಾಂ. ಜೆಲ್ವಾದ ನಿನ್ನ ರೂಪದೈಸಿರಿಯ ಕಪ್ಪಮಂ ಕೊಟ್ಟೆನ್ನ ಸ್ವಾಮಿತ್ವಮನೊಪ್ಪಿದೊಡೆ ಬೇಕಾದ ಭಾಗ್ಯಮಂ ಪಡೆವೆ ನೀಂ. ಮತ್ತೊಲ್ಲದೊಡೆ ಪೌರುಷದಿ ನಿನ್ನ ಮಾನವಂ ಮದನನಗ್ನಿಯೊಳ್ ಹೋಮಿಸುತೆ ನನ್ನೆದೆಯ ತೃಷ್ಣೆಯಂ ನೀಗುತಾಂ ಮಾರದೇವನಂ ಮೆಚ್ಚಿಸುವೆ. ನೋಡೆನ್ನ ಸಾಹಸವ ನೀಂ" ಎಂದೊಡನೆ ಸಿಂಹಿಣಿಯ ತೆರದಿಂದೆ ಸಿಡಿದೆದ್ದು ಕೋಪಿಸುತೆ ದಮಯಂತಿ ತಾಂ ಕಿರಾತನಂ ಛೀಗಳೆದು "ದುರಾತ್ಮ ನೀನೆನ್ನನುಳಿಸಿರ್ದೊಡಂ ನನ್ನನಂತೆಯೆ ನನ್ನ ಸತಿತನವನುಂ ಕೆಡಿಸುತಿಹೆ ಪಾಪಿ. ಮುಟ್ಟಿದೊಡೆ ಜೋಕೆ. ನಳನಾಣೆ ಮೇಣ್ ಹರನಾಣೆ, ಹಾಳಾಗದಿರು; ತೊಲಗತ್ತ ಸಾರುತೀಗಲು ನಿನ್ನನಾಂ ಕ್ಷಮಿಸುತಿಹೆಂ. ಮನೆಸೇರಿ ಮಡದಿಮಕ್ಕಳ ಸಹಿತಲೀಶನಂ ಮೆಚ್ಚಿಸುತೆ ಸುಖದೊಳಿರು" ಎನಲದಂ ಕೇಳುತಾ ಕುತ್ಸಿತಂ ತನುಮದದೆ ನಗುತೆ ನಿಂದಲ್ಲೆ ಬಾಗುತೊಯ್ಯಾರದಿಂ ಮತ್ತವಳ ಕೇಶಮಂ ಪಿಡೆವೆನೆಂಬಾತುರದಿ ಕೈಚಾಚಲನ್ನೆಗಂ ಶಿವಶಿವಾ! ಜುಣುಗುತ್ತೆ ಸಾಧ್ವಿತಾಂ ಸರ್ಪಭೂಷಣನನಾ ಕಾಮಾರಿಯಂ ನೆನೆದು ಪೂರ್ಣಭಕ್ತಿಯೊಳೊಂದಿಸುತೆ ಮಾನಸದಿ ಮುಂದಾವ ದಾರಿಯಂ ಕಾಣದೆಯೆ ನೊಂದದೆಯು ನುಡಿ

ಯಿಂದೆ "ಕನಸುಮನಸಿನೊಳಾವಗಂ ನಾಂ ಪತಿಯನೇಕೋಭಾವದಿಂ ಪೂಜಿಪುದು ದಿಟವಾಗಿರ್ದೊಡೆನ್ನ ಸತಿತನವನಾ ಗಿರಿಜಾತೆ ಮೆಚ್ಚಿರ್ದೊಡೆ ನಳನರಸಿಯಂ ಕೆಣಕುವೀನೀಚ ನಿಷಾದನೀಕ್ಷಣದಿ ಮೃತ್ಯುವಿನ ಬಾಯ್ಗೆ ತುತ್ತಾಗಲೆಂ"ದು ಶಪಿಸಲ್ಕೆ ಬಾಗಿರ್ದ ಶಬರತಾನೆತ್ತಣಿಂದಲೊ ಸರಿದು ಬಂದೊಡನೆ ಮಡವಂ ಕಡಿದ ಪಾವಿನಾ ನಂಜಿನಿಂ ಕಾಲ್ತಪ್ಪಿ ಬೀಳುತ ಲ್ಲಿಯೆ ಕಲ್ಲಿನೊಳ್ ತಲೆಯೊಡೆದು ತನ್ನಸುವನೀಗಿದಂ ಸುದತಿಯಾಡಿದ ಶಾಪದಾ ನುಡಿಯಃಸಾಮಾರಾರಿ ಮನ್ನಿಸಿದನೆನೆ.

ಲೋಕಲೋಕಂಗಳಂ ಪಿಡಿವುತಾಧರಿಸಿ ಮತ್ತಾ ತತ್ವತಾಂ ಮಾನವನ ಕರ್ಮನಿರ್ದೇಶನಕೆ ಮೂಲವಾಗಿರ್ದಪುದೋ ಮತ್ತದೇ ಧರ್ಮತಾನುಜ್ವಲಿಸಿ ಬೆಳಗುತಿರ್ದಪುದಾವಗಂ ಸತೀತ್ವದಾಜ್ಯಾಹುತಿಯ ಮಹಿಮೆಯಿಂದೆ. ಹದಿಬದೆಯರಾಶೀರ್ವಚನಬಲದಿಂದೆ ಹಗಲಿರುಳು ಗ್ರಹತಾರೆಗಳ್ ಮೇಣ್ ಋತುಕಾಲ ಭೇದಗಳ್ ಉರುಳುತಿರ್ದಪುವು ಕಾಲಕ್ರಮದೆ ಸತತವಾಗಿ. ಪೂರ್ವದೊಳತ್ರಿ ಮುನಿಪನ ಪತ್ನಿತಾಂ ತೂಗಿದಳ್ ತ್ರೈಮೂರ್ತಿಗಳ ತನ್ನಾಶ್ರಮದಿ ತೊಟ್ಟಿಲೊಳಿಟ್ಟು ಪಾಲ್ಗೊಟ್ಟು ಜೋಗುಳವ ಪಾಡಿ ಪಾಡಿ. ಗಗನಮಧ್ಯದೊಳಲ್ಲೆ ಮಾರ್ತಾಂಡನಂ ತಡೆದಿರ್ದಳೊರ್ವೆ ಮಹರ್ಷಿವಸಿಷ್ಠನಾರ್ಯೆತಾಂ ತನ್ನ ಸತಿತನದ ಧರ್ಮದಿಂದೆ. ಮೃತ್ಯುಪಾಶದಿ ಬಿಗಿದು ನಿಜಪತಿಯ ಪ್ರಾಣವಂ ಕೊಂಡೊಯ್ವ ಜವನ ಜತೆಯಲಿ ನಡೆದು ಧರ್ಮದಿಂ ಪತಿಯಸುವ ಪಿಂತಿರುಗಿ ಪಡೆದಿರ್ದಳೇಂ ಧನ್ಯಳೋ ಸಾವಿತ್ರಿ ತಾಂ ಸತ್ಯವಾನನ ಮಡದಿ. ಮತ್ತೆಮ್ಮ ನಿಷಧೇಂದ್ರನರ್ಧಾಂಗಿಯೇಂ ಕಿರಿಯಳೇ? ರಾಜ್ಯಸಿರಿ ತೊಲಗಿರ್ದೊಡಂ ಸತೀತ್ವದೊಂದೇ ಧರ್ಮದೈಸಿರಿಯ ಪಾಲಿಸಿದ ದಮಯಂತಿಯುಂ ಮೇಣವಳ ಮಾನವುಂ ಮತ್ತದೇ ಧರ್ಮತಾಂ ಕಾಯ್ದಿರ್ದುದೆನೆ ಕೈಚಾಚಿ ಬಾಗಿರ್ದ ವ್ಯಾಧ ತಾಂ ತನುವ ನೀಗಿರ್ದನಲ್ಲೆ, ಪಾಪಿತಾಂ ತನ್ನ ಕರ್ಮಕೆ ಫಲಪಡೆದ ತೆರದಿ. ಕಾಮನಂ ಸುಟ್ಟುರುಹಿ ಪ್ರೇಮವಂ ಪಾಲಿಸಿದ ಹರನುಮಂತೆಯೆ ಕಾಮಿಗಳ ಹತಿಸುತ್ತೆ ಪ್ರೇಮಿಗಳನನವರತ ಪಾಲಿಪಂ ಪ್ರೇಮದಿಂದೆ. ಶಪಿಸುತ್ತೆ ಮತ್ತಲ್ಲಿ ನಿಲ್ಲದೆಯೆ ಹರನ ನೆನೆಯುತೆ ಸತಿಯು ತಾಂ ಹಿಡಿಯೊಳಗೆ ಜೀವವಂ ಪಿಡಿಯುತ್ತೆ ಗೊಂಡಾರಣ್ಯದೊಳ್ ಪಾಯ್ದೋಡು

ತಿರ್ದಳ್ ಹಸಿದ ತೋಳನ ಕೈಯ್ಯೊಳಸುವನುಳಿಹಿಸುತೆ ನುಸುಳುತೋ ಡುತ್ತಲಿರ್ದೊಂದು ಪೆಣ್ ಜಿಂಕೆಯಂದದಲಿ. ಕಾಂತಾರವನ್ನುಳಿದೆಲ್ಲಾದ ರೊಂದು ಗ್ರಾಮಾಂತರವ ಸೇರ್ವೆನೆಂದು ಓಡುತೋಡುತೆ ಕಾಡೊಳ ಲ್ಲೊ ಗಿರಿಗಳಂ ಹತ್ತುತಿಳಿಯುತ್ತೆ ಝುರಿಗಳಂ ದಾಂಟುತ್ತೆ ಗೋಚರಿಸಿದಾ ವುದೋ ದಾರಿಯೊಂದಂ ಪಿಡಿದು ನಡೆದಳ್ ಮತ್ತೊಂದು ಗಿರಿನದಿಯು ತಡಿಗೆ. ಆ ನದಿಯನುತ್ತರಿಸಿ ಹರಿವ ನೀರಿನ ದಿಶೆಯು ಮುಂದಿಟ್ಟು ನಡೆ ಯಲ್ಕೆ ದೂರದೊಳ್ ಕಾಣಿಸಿತು ಪಿರಿದಾದ ಶಿಬಿರವೊಂದು. ಪಡುಗ ಡೆಯೊಳಾಗಸದಿ ರವಿಯು ತಾಂ ಕಡಲಕೂಡುವ ತವಕದೊಳ್ ಬನಗಿ ರಿಯ ಮೇಲಿಂದೆ ಸಾರುತಿರೆ ನೂರಾರು ಹೇರಾಟದೆತ್ತುಗಳ ಬಿಟ್ಟಲ್ಲಿ ಮೇಯಿಪರಂತೆಯೆ ನದಿಯ ನೀರಿನೊಳಿಳಿದು ಮಿಂಯುತ್ತೆ ಮಾರ್ಗಶ್ರ ಮವ ಕಳೆವವರ್ ಮೇಣ್ ಬಿಂದಿಗೆಯ ನೀರಿನೊಳಗದ್ದುತ್ತೆ ಮೊಗೆದು ನೀರ್ತುಂಬಿ ಸಾಗಿಪರನೆಲ್ಲರಂ ದೂರದಿಂ ನೋಡುತ್ತೆ ನೋಡುತ್ತೆ ದಮ ಯಂತಿ ತಾಂ ನೆರೆಮನೆಯನುಳಿದು ಬಂದಿರ್ದ ಮೊದಲಲ್ಲಿ ಬಂಧುಗಳ ಕಂಡ ತೆರದಿಂದೆ ಕಳೆದುಳಿದ ಸಂತಸದಿ ನಗುತಲಾ ಶಿಬಿರಕಭಿಮುಖಳಾಗಿ ನಡೆಯುತ್ತೈತರಲನ್ನೆಗಂ ಮತ್ತಿವಳ ಭಂಗಿಯಂ ಕಾಣುತಲ್ಲಿಯೆ ಕೂಡಿರ್ದ ಜವ್ವನಿಗರಾಕ್ಷಣದಿ ಕೈತಟ್ಟಿ ತಾರುಣ್ಯಚೇಷ್ಟೆಯಂ ತೊಡಗಿರಲ್ ಕಾಣು ತವದಿರ ವೃದ್ಧನಾಯಕಂ ಹುಂಕಾರದಿಂದಪಹಾಸ್ಯಮಂ ನಿಲ್ಲಿಸುತೆ ಮುಂಪೆದ್ದು ಬಂದವಳ ಪರಿಕಿಸುತೆ ಮಾತಾಡಿದಂ, ಮತ್ತವಳ ವೃತ್ತಾಂತ ಮಂ ವಿನಯದಿಂದೆ ಕೇಳುತ್ತೆ. ಸೌಶೀಲ್ಯದಾ ಮಾತುಗಳನರಸಿ ತಾಂ ಬಿನ್ನೈಸಿದಳ್ "ಸತಿಯುನಾಂ ದೀನೆಯಾದೆನಗೆ ಮೊದಲಾಗಿ ತಮ್ಮಿರವ ನೊರೆವುದೆಂ"ದು, ಕಿರುನಗೆಯ ಸೂಸುತಾ ಹಿರಿಯುವಂ ತಲೆಯ ತೂಗುತ್ತೆ ಕನಿಕರಿಸಿ ನುಡಿದನಿಂತು "ಬಾಲೆ ಕೇಳ್ ದೀನೆಯಲ್ಲದೆ ನೀನಾಥೆಯಾ ದೊಡೇಂ. ಕುತ್ಸಿತರು ನಾವಲ್ಲ? ದೇಶದೇಶಂಗಳಂ ತಿರುಗುತ್ತೆ ಬೇಕಾದ ಸರಕುಗಳ ಕೊಳ್ಳುತ್ತೆ ಮಾರುತ್ತೆ ಸಂಚಾರವಂ ಕೈಕೊಂಡ ವರ್ತಕರು ನಾವ್. ಮುಂದೆ ಮೂರ್ದಿನದಿ ಚೇದಿರಾಜ್ಯಮಂ ಸೇರ್ದ ಪೆವು. ಭಯಬೇಡ ತಾಯೆ. ನಿನ್ನ ಮಾನಕೆ ಕೊರತೆಯಾಗದ ತೆರದಿ ಪಾಲಿ ಪೆವು. ಪೇಳು ನೀನಾರು? ಮತ್ತೇಕೆ ಬಳಲಿರ್ಪೆ? ಶಿವನಾಣೆ ಸುಳ್ಳಲ್ಲ ಮಗು

ಳಂತೆ ಕಂಡಪೆಂ." ಕೇಳಿದಾಗಲೆ ಸತಿಯು ಸಂತೋಷದಿಂ ವೃದ್ಧನಂ ವಂದಿಸುತೆ ರಾಜರಾಣಿತ್ವಮಂ ಬಚ್ಚಿಟ್ಟು ಹುಸಿಯ ಹೆಸರುಗಳ ಮಾತ್ರ ಸೇರಿಸುತೆ ನಳನರಸಿ ಜೂಜಿನೊಳ್ ಸೋತು ದುರ್ದೆಸೆಗೆ ತುತ್ತಾಗಿ ಮತ್ತೆಡೆಬಿಡದೆ ನಡೆದಿರ್ದ ವೃತ್ತಾಂತಮಂ ಪೇಳಿದಳ್ ಕೇಳ್ವವರ ಬಗೆಯೆಲ್ಲ ಕರಗುವಂತೆ. ವೃದ್ಧವರ್ತಕಂ ತಾಳುತ್ತೆ ದುಗುಡಮಂ, ಮುನ್ನೊರೆದ ತೆರದಿಂದೆ ಭೈಮಿಗಾಶ್ರಯಮನಿತ್ತವಳನುಪಚರಿಸಿ ಮನ್ನಿಸಿದನಂತೆಯೆ ಮತ್ತವನ ಪರಿವಾರಂ ಗೌರವಿಸಿತಾ ಸುದತಿಯುಂ ವೃದ್ಧನಾಣತಿಯುಕೊಂಡು.

ಮುಳುಗಿದಂ ಸೂರ್ಯನನಿತರೊಳ್ ಕವಿದ ಕತ್ತಲೆಯೊಳಾ ಶಿಬಿರಮಂ ಬೆಳಗಿದುವು ಹತ್ತಾರು ಸೊಡರುಗಳ್, ನಿಷಧಾಧಿಪನ ರಾಣಿಯಾ ಚಿತ್ತದೊಳ್ ಮೂಡಿರ್ದ ನೂರಾರು ಭಾವಗಳ ತೆರದಿ. ಮತ್ತೊಡನೆ ಭೋಜನಕೆ ಕರೆಯಲಾ ಸಾಧ್ವಿ ತಾಂ ವೃದ್ಧನೊಡವೆರಸಿ ಮಂಡಿಸುತೆ ತನ್ನರಸನಂ ನೆನೆನೆನೆದು ಸುರಿವ ಕಣ್ಣೀರಿನೊಳೆ ತಾನೂಟಮಂ ತೊಡಗಿದಳ್ ಹಿರಿಯನೊತ್ತಾಯದಿಂದೆ. ವಟಪಲಾಶಾದಿಪರ್ಣಂಗಳಂ ಕೂಡಿಸುತೆ ಗೈದಿರ್ದ ಪತ್ರಾವಳಿಯ ಮೇಲಿಕ್ಕಿರ್ದರೆನಿತೆನಿತೋ ಮಧುರಾಮ್ಲಮಯ ಪದಾರ್ಥಂಗಳಂ ರೊಟ್ಟಿಯುಂ ಘೃತಸೂಪಶರ್ಕರೆಯನಂತೆಯೆ ತೈಲದೊಳ್ ಕರಿದಿರ್ದ ಸೆಂಡಿಗೆಯನುಂ. ಎಲ್ಲರೊಡನೊಟ್ಟಾಗಿ ಸಹಪಂಕ್ತಿ ಭೋಜನಕೆ ತೊಡಗಿರ್ದೊಡೇಂ ದಮಯಂತಿ ತಾನುಂಬಳೇನಂ? ತುತ್ತಿಗೊಂದೊಂದೆ ನಿಟ್ಟುಸಿರ ಸೂಸುತ್ತೆ ನುಂಗಿದಳ್ ನಾಲ್ಕಾರು ತುತ್ತುಗಳನೀಶ್ವರಾರ್ಪಣಬುದ್ಧಿಯಿಂದೆ. ಮತ್ತೆಲ್ಲ ವರ್ತಕರ್ ಸುಖಭೋಜನವ ತೀರಿಸುತೆ ಸಮ್ಮೋದಗೋಷ್ಠಿಯೊಳ್ ಕೆಲಕಾಲಮಂ ಕಳೆಯುತ್ತೆ ಪಿರಿದಾದ ಅಗ್ಗಿಷ್ಟಿಕೆಯನೊಂದನೊಟ್ಟುತ್ತೆ ಮಲಗಿ ನಿದ್ರೆಯೊಳ್ ಮೈಮರೆದೊಡೇಂ? ತಾನೊಂದು ಮೂಲೆಯಲಿ ವೃದ್ಧನಿತ್ತಿರ್ದ ಕಂಬಳಿಯ ಹಾಸುತ್ತೆ ಮನದೊಳಗೆ ಕಾಂತನಂ ಧ್ಯಾನಿಸುತೆ ಮಲಗಿರ್ದ ದಮಯಂತಿಗೇಂ ನಿದ್ರೆ ಬಂದಪುದೇ? ಪತಿಯನಗಲಿರ್ದ ದುಃಖಮೊತ್ತರಿಸುತಿರೆ ಮತ್ತವನ ದುಸ್ಥಿತಿಯ ನೆನೆನೆನೆದು ಕಣ್ಣೀರಮಿಡಿಯುತ್ತೆ ಬಾಲರಂ ಕುರಿತು ಯೋಚಿಸುತೆ ಮತ್ತೆ ಮತ್ತದನೆ ಚಿಂತಿಸುತೆ ವಿಧಿಗೊಟ್ಟ ಶಿಕ್ಷೆಯೊಳ್ ಮಾನಮಂ ರಕ್ಷಿಸುತೆ ಮುಂದೆಂತು ಬಾಳ್ವುದೆಂದಾಕೆ ನಿಲುಕದಾ ಗುರಿಯನರಸುತ್ತೆ

ತೊಳಲುತ್ತೆ ಮನದೊಳಗೆ ಮರುಗಿದಳ್. ಮಾನಿನಿಯುಂ ಮಾನಸದಿ ಕಳೆವಳಂ ಪೆರ್ಚುತಿರಲು ಮಲಗಿದಲ್ಲಿಂ ಮೇಲೆದ್ದು ಮಂಡಿಸುತೆ ಮತ್ತೊಡನೆ ತಾಳಲಾರದೆ ಸಂಕಟವನಲ್ಲಿಯೆ ಬಿದ್ದು ಬಿದ್ದಳುತೆ ಹೊರಳಿ ನರಳುತೆ ತನ್ನೆರಡು ಕೈಗಳಿಂ ಹಣೆಯ ಬಡಿಬಡಿದು ರೋದಿಸುತೆ ಮತ್ತಡಿಗಡಿಗೆ ಮಹಾದೇವನಂ ಪ್ರಾರ್ಥಿಸುತೆ ದುಃಖದಾ ರಾತ್ರಿಯಂ ದೂಡುತಿರಲನ್ನೆಗಂ ಪ್ರಾಪ್ತಿಸಿತು ಬೇರೊಂದು ದುರ್ಘಟಂ ಬರಸಿಡಿಲ್ ಬಂದೆರಗಿದಂತೆ.

ನಡುವಿರುಳು ನಿರ್ಜೀವನೀರವದೊಳಾ ಗಹ್ವರಂ ಸ್ತಬ್ಧತೆಯನಾಂತಿರಲ್ ಲಯಕಾಲನಾಟೋಪಮಂ ವಿೂರಿಸುತೆ ಶಿಲಾವೃಷ್ಟಿಯಂಕರೆವ ಮೇಘಗಳ್ ರಭಸದಿಂ ತಾಗುತಂಬರದಿ ಸಿಡಿಲೆದ್ದು ಭೂಗರ್ಭವಂ ಭೇದಿಸುವ ಘೋರನಿಸ್ವನದ ತೆರದಿಂದೆ ಮೇಣ್ ಚಿತ್ತಭಿತ್ತಿಯು ಬೆದರಿಬಿರಿವಂತೆ ನಿದ್ರಿಸದೆ ಶೋಕಾರ್ಣವದಿ ಮುಳುಗುತೇಳುತೆ ನವೆಯುತಿರ್ದಾದಮಯಂತಿಗಾ ಕ್ಷಣಂ ಕೇಳಿಸಿತ್ತತಿ ಭಯಂಕರಂ ಭೀಕರನಿನಾದಂ. ನಡುಗಿದಳ್ ಕೇಳ್ದೊಡನೆ; ಸೀಳ್ದೆದೆಯ ಘೋರಾರವಕೆ ಬೆದರಿ ಬಾಯ್ಬಿಟ್ಟು ಬೊಬ್ಬಿರಿಯೆ ಸುದತಿ ತಾಂ ನಿದ್ರಿತಪರಿಸ್ಥಿತಿಯೊಳಲ್ಲಿ ಬಿದ್ದಿದ್ದ ವರ್ತಕರ್ ತಾವ್ ಗಡಿಬಿಡಿಯೊಳೊಬ್ಬರೊಬ್ಬರನೆಬ್ಬಿಸುತೆ ಸ್ವಪ್ನದಿಂ ಜಾಗರಕೆ ನುಣಿಚಿ ಬರೆ ನೋಳ್ಪರೇನಂ! ಭೀತಿಯೊಳ್ ಚೈತನ್ಯ ಉಡುಗಿರಲ್ ಮತ್ತನಿಬರುಂ ಬೆಕ್ಕಸದಿ ನಡುಗುತೀಕ್ಷಿಪರ್ ಪ್ರಳಯರೌದ್ರತೆಯನಾಂತಿರ್ದ ಮೃತ್ಯುಲೀಲೆಯ ಪರಿವಾರನೃತ್ಯಮಂ ಮೇಣ್ ಅಕಾಲದೊಳ್ ಬಂದಡಸಿರ್ದ ಪರಿಭವವನುಂ. ಘೀಂಕರಿಸುತರಣ್ಯದೊಳ್ ಮರಗಿಡಂಗಳಂ ಮುರಿದು ಕೆಡಹುತ್ತೆ ತುಳಿತುಳಿದು ಮೆಳೆಗಳಂ ಬೀಳಿಸುತೆ ಮತ್ತದೇ ತುದಿಯ ಬಿದಿರೆಳೆಗಳಂ ಮೆಲ್ಲುತುಲ್ಲಸದಿ ಸೊಂಡಿಲಂ ಮೇಲೆತ್ತಿ ಘರ್ಜಿಸುತೆ ನೆಗೆನೆಗೆದು ಪದಹತಿಗೆ ಪರ್ವತಾರಣ್ಯಗಳ್ ನಡುಗುತಿರೆ ನದಿಯ ದಾಂಟುತ್ತೆ ಬಂತೊಂದು ಪೆರ್ಬಡೆಯ ತೆರದಿಂದೆ ಕಾಡಾನೆಗಳ ಹಿಂಡುತಾಂ ಸಂಚಾರಚೈತನ್ಯಮಂ ಕೈಗೊಂಡ ಪೆರ್ಬಂಡೆಗಳ ಮೇಣ್ ಕೈಕಾಲುಗಳ್ ಮೂಡಿರ್ದ ಕುಲಾದ್ರಿಗಳ ಪೋಲ್ದು.

ಕಾರಿರುಳ ರುದ್ರರಾತ್ರಿಯೊಳಲ್ಲಿ ಕಾನನದ ಮೂಲೆಮೂಲೆಯೊಳ್ ಕರಿಘಟೆಯ ಬೃಂಹಿತಂ ಮರುಕೊಳಿಸೆ ಶಿಬಿರಕಭಿಮುಖವಾಗುತ್ತೈತರಲ್

ದಂತಿಗಳ್, ಕೇಳ್ದೊಡನೆ ಘರ್ಜನೆಯು ಹೇರಾಟದೆತ್ತುಗಳ್ ಬಾಲಂಗಳಂ ಮೇಲೆತ್ತಿ ಬಾಯ್ಬಿಟ್ಟು ತಲ್ಲಣಿಸಿ ಕಿವಿಗಳಂ ನಿಮಿರ್ಚಿ ಬಂಧನವ ಕಡಿದಿಕ್ಕಿ ಪಾಯ್ದೋಡಲಾರದಿರ್ದಲ್ಲೆ ಬಿದ್ದೆದ್ದು ಕೈಕಾಲ್ಗಳಂ ಬಡಿಬಡಿದು ಮತ್ತಡಿಗಡಿಗೆ ತವ್ಮೊಡೆಯುರಂ ದಿಟ್ಟಿಸುತೆ ಭೈರವಾವೃತಮೃತ್ಯುಮುಖ ದೃಶ್ಯಮಂ ಕಂಡಂಜಿ ಬೊಬ್ಬಿರಿಯೆ ವರ್ತಕರ್ ಕಳವಳದಿ ಕಂಗೆಟ್ಟು ಘೋಳಿಟ್ಟು ಮರುಗಿದರ್ ತಂತಮ್ಮ ಮನೆಗಳಂ ಧನಗಳಂ ಮೇಣ್ ಮಡದಿ ಮಕ್ಕಳಂ ಬಂಧುಬಾಂಧವರ ನೆನೆದು. ವಿಧಿಯ ಕುರಿತಾಡುತ್ತೆ ಹಳಿಯುತ್ತೆ ನಿಂದಿಸುತೆ ಗ್ರಹಗಳಂ ಬಯ್ಯುತ್ತೆ ಮತ್ತೇನೇನೋ ಮಾತುಗಳನರಸುತ್ತೆ ಛೀಗಳೆದು ದಮಯಂತಿಯುಂ ಮೂದಲಿಸತೊಡಗಿದರ್ ಕೆಲಬರಾಕ್ಷಣದಿ ಮತ್ತಿವಳ ಪಾರಬ್ಧಮೋ ಬಾಧಿಪುದು ತಮ್ಮನೆಂದು. ಆದೊಡೇಂ ತಿಳಿಗೇಡಿಯೋ ತಾಂ ವೃದ್ಧವರ್ತಕಂ? ಬಂದಿವಳ ಬಳಿನಿಂದು ಮರುಗುತ್ತೆ, ಮಗಳೇ "ನಿನ್ನನಾಂ ರಕ್ಷಿಸುವೆನೆಂದೊರೆದು ನಂಬಿಸುತೆ ಕಾಡಾನೆಗಳ ಧಾಳಿಯೊಳ್ ಕೆಡಹುತ್ತೆ ಮೃತ್ಯುವಿನ ಬಾಯ್ಗೆ ಕೈಯಾರೆ ದೂಡಿದಂ ಮಹಾಪಾಪಿ ನಾಂ ಮನ್ನಿಸೆನ್ನಂ" ಎಂದೆನಲ್ ವೈದರ್ಭೆ ತಾಂ ಕಂಠಗತ ಧೈರ್ಯದೊಳ್ ಕೈಯುಜೋಡಿಸುತೆ ನುಡಿದಳಿಂತು– "ವರ್ತಕಂ ನೀನಾದೊಡೇಂ? ಸುಖದುಃಖದೊಳ್ ಪರಿವರ್ತನಂಗೊಳ್ಳದಾತ್ಮಮಂ ಪಡೆದಿರುವೆ; ಧನ್ಯನೀಂ. ಅಲೆದಲೆದು ಕಾಡಿನೊಳ್ ಕಂಗಾಣದಿರೆ ನನಗಾಶ್ರಯುವನಿತ್ತು ಪೊರೆದಿರ್ಪೆ. ಮತ್ತೀಗಳುಂ ನನಗಾಗಿ ಮರುಗುತಿರ್ಪೆ. ನೀನೆನ್ನ ಜನಕಂಗೆ ದೊರೆ. ಬಿಡದೆನ್ನ ಕಾಡುತಿಹ ವಿಧಿಯು ನನ್ನೊಡನೆ ನಿನ್ನನುಂ ನಿನ್ನ ಪರಿವಾರ ಸಕಲಮಂ ಪೀಡಿಸಿದುದು. ಹತಭಾಗ್ಯಳಾದೆನ್ನ ದೆಸೆಯಿಂದೆ ನಿಮ್ಮನ್ನರುಂ ಬಾಧೆಗೀಡಪ್ಪುದಲ್ತೆ? ಏನಾದೊಡಂ ಪಶುಪತಿಯೆ ಕಾವುದಲ್ಲದೆ ಬೇರೆ ಗತಿಯುಂಟೆ? ಪತಿಯುನಗಲಿದೊರ್ಡಂ ಮತ್ತೆನ್ನ ಮನವನಾತನ ಪಾದದೊಳ್ ನೆಟ್ಟಿರ್ಪೆ. ನನ್ನಂತರಾತ್ಮನ ಸಾಕ್ಷಿಯೊಳ್ ಮೇಣೆನ್ನ ಹದಿಬದೆಯು ಸವ್ರತವನೆನ್ನಪ್ರಾಣೇಶ್ವರಂ ಮೆಚ್ಚಿದೊರ್ಡೀಪರಿಭವದಿ ಜಗದಂಬಿಕಾವಲ್ಲಭಂ ಬಿಡದೆಮ್ಮ ರಕ್ಷಿಸಲಿ. ನಾವೆಲ್ಲರೊಟ್ಟಾಗಿ ದೃಢಮನದಿ ಮೃಡನನಾ ಮಹಾದೇವನಂ ಪ್ರಾರ್ಥಿಸುತೆ ಭಜನೆಯುಂ ಗೈಯೋಣ, ನಡೆ

ಯೆಂದು ಬಿನ್ನೈಸಲಾ ಹಿರಿಯ ತಾನೆಲ್ಲರಂ ಕರೆಕರೆದು ಕೂಡಿಸುತೆ ತೊಡಗಿದಂ ಪ್ರಾರ್ಥನೆಯನಾ ಮಹಾರಾಣಿಯಾದೇಶವಂ ಕೈಕೊಂಡು. ಮೇಣ ವಳ ಮುಂದಾಳುತನದಿಂದೆ ಭಕ್ತಿಭಾವದೊಳೀಶನಂ ನೆನೆದು ವಂದಿಸುತೆ ಕೊಂಡಾಡಿ ಬೇಡಿದರನಿಬರುಂ ಗಜಚರ್ಮಭೂಷನಂ ಮತ್ತವನ ಸಹಸ್ರಾರು ನಾಮಂಗಳಂ ಪಾಡಿಪಾಡಿ. ನಳನರಸಿ ದಮಯಂತಿ ತಾನಡಿಗಡಿಗೆ ಶಿವನ ವಂದಿಸುತೆ ಮಾನಸದಿ ಅಗ್ನಿಷ್ಟಿಕೆಯೊಳುರ್ರಿದಿರ್ಪ ಕೊಳ್ಳಿಯಂ ಕೈಯ್ಯೆತ್ತಿ ದೂರಕೆಸೆಯುತ್ತೆ ಒಂದಿನಿತು ಭಸ್ಮಮಂ ಭಾಳದೊಳ್ ಲೇಪಿಸುತೆ ಸರ್ವೇಶನಂ ಪ್ರಾರ್ಥಿಸುವ ವರ್ತಕರ ಮಧ್ಯದೊಳ್ ಮೊಣಕಾಲನೂರಿ ಮಂಡಿಸುತೆ ಮುಂದೆಸೆಗೆ ನಸುಬಾಗಿ ಕೈಯ್ಯಜೋಡಿಸುತೆ ಹಣೆಯು ಮೇಲಿಟ್ಟು ಹೃದಯಾಂತರಾಳದಾಲಾಪಮಂ ಸೇರಿಸುತೆ ಚಿತ್ತದೇಕಾಗ್ರತೆಯೊಳಭವನಂ ಪ್ರಾರ್ಥಿಸಿದಳತ್ಯಂತ ಭಕ್ತಿಯಿಂದ "ಓಂ ಚಂದ್ರಶೇಖರ ಚಂದ್ರಶೇಖರ, ಚಂದ್ರಶೇಖರ ಪಾಹಿ ಮಾಂ, ಚಂದ್ರಶೇಖರ, ಚಂದ್ರಶೇಖರ, ಚಂದ್ರಶೇಖರ ರಕ್ಷ ಮಾಂ. ಪಂಚಲಿಂಗನೆ, ಶಿವನೆ ಪಂಚಮುಖದಿಂ ಪ್ರಪಂಚವಂ ರಕ್ಷಿಸುವೆ. ಫಾಲಾಕ್ಷ, ಪಂಚಾನನಂ ನೀಂ ವಿದ್ರೋಹಿಗಜಪಂಚಾನನಂ ಗಡ! ಪರಾತ್ಪರಂ ಪರಮೇಶ ನೀಂ ಪತಿತರಾದೆಮ್ಮನುದ್ಧರಿಸಿ ಕಾಪಾಡು ಶಂಭೋ. ಕಾನನದ ಕರಿಕುಲಂ ಧಾಳಿಗೊಂಡೈತಂದು ನನಗಾಶ್ರಯವನಿತ್ತಿರ್ದ ವರ್ತಕರ ಸರ್ವಸ್ವನಾಶವಂ ತೊಡಗಿರ್ಪುದೈ ಕರುಣಾರ್ಣವನೇ! ನೀಂ ಲೋಕಪಾಲಂ. ಕಾಲಕಾಲಂ. ತ್ರ್ಯಂಬಕಂ ತ್ರಿಪುರಾಂತಕಂ ವಿಶ್ವನಾಥಂ ವಿಭೂ ಸರ್ವೇಶ್ವರಾ! ವಿಧಿಯು ಕೆರಳಿರ್ದೊಡೀ ದಿನದೊಳೆನ್ನಾತ್ಮಮಂ ಬಲಿಗೊಂಡು ದಯದಿಂದೆ ಮತ್ತುಳಿದರಂ ಪಾಲಿಪುದು. ಮೇಣೆಂತಿರ್ದೊಡೆನ್ನರಸನಂ ರಕ್ಷಿಪುದು. ಜನ್ಮಜನ್ಮಾಂತರದೊಳೀಭವದ ಪ್ರಾಣೇಶ್ವರನೆ ಕೈವಿಡಿದು ಪತಿಯಾಗಲೆಂದೆನ್ನ ಹರಕೆಯಂ ಮನ್ನಿಸುತೆ ಶರ್ವ ನೀಂ ಕಾವುದೆನ್ನಂ ಶಂಕರಾ! ಸತಿಯು ನಾಂ ನನ್ನ ಮಾಂಗಲ್ಯಮಂ ಮಾನಪ್ರಾಣಂಗಳಂ ನಿನ್ನ ಪಾದಾರ್ಪಣಂಗೊಳಿಪೆ. ಕೊಳ್ಳೆನ್ನ ಶಿವನೇ ರಕ್ಷಿಸೀ ಬಂಧುಗಳ ಪ್ರಾಣಮಂ ವರ್ತಕರ ತಂಡಮಂ ಪಶುಪತೇ! ಪಾಹಿ ಮಾಂ!"

ಅನಿತರೊಳ್ ಸುದತಿ ತಾಂ ತೆಗೆದೆಸೆದ ಕೊಳ್ಳಿಯಿಂ ಕಿಚ್ಚೆದ್ದು ಒಣ

ಮರಗುಗಳ ಮೇಲ್ ಪ್ರಜ್ವಲಿಸಿ ಮೆಳೆಗಳಂ ನೊಣೆಯುತ್ತೆ ಭುಗ್ಗೆಂದು ಮೇಲ್ವಾಯ್ದು ಛಿಟಿ ಛಿಟಿಲ್ ನಿಸ್ವನದಿಂದೆ ದಳ್ಳುರಿಯು ಮೇಲೇರೆ ಕಾನನಂ ಪೊತ್ತಿತೆನೆ ಘಾಲಾಕ್ಷನುರಿಗಣ್ಣಿನಿಂ, ವಾರಣಂಗಳ ರಾಜಿ ತಾನಪ್ಪರೊಳ್ ಬೆನರುತಗ್ನಿಯುಂ ಜ್ವಾಲೆಯುಂ ಕಂಡೊಡನೆ ಪಾಯ್ದೋಡಿತೆತ್ತೆತ್ತಲೋ ಜೀವಾಭಿಲಾಷೆಯಿಂದೆ. ಕರ್ಮಧರ್ಮಂಗಳೊಂದಾಗೆ ಶಿವನೊಲುಮೆಯುಂ ಪಡೆದೊಂದು ನಿಮಿಷದೊಳ್ ದಮಯಂತಿ ತಾನಟ್ಟಿದಳ್ ಧಾಳಿಗೊಂಡಿರ್ದಿಭಕುಲವನಲ್ಲಮಂ; ಬೀರಿದಳ್ ವರ್ತಕರ ಚಿತ್ತದೊಳ್ ಧೈರ್ಯಮಂ; ಮೇಣ್ ತೋರಿದಳ್ ಹರನಡಿಯನಂಬಿರ್ದ ಭಕ್ತಿಯಿಂ ಪಡೆದಿರ್ದ ಶಕ್ತಿಯುಂ; ಕನಸಿನೊಳ್ ಕಂಡು ಮಾಯುವಾದಂತೆ ಪರಿಭವಂ ಕಂಡಳಿಯೆ ತೋಷದಿಂ ಕೊಂಡಾಡಿದರ್ ಶರಣೆಯುಂ ಶಿವಭಕ್ತಿ ಪರಿಪೂರ್ಣೆಯುಂ. ಆದೊಡೇಂ ತಾನರಿವಳೇ ಸತಿಯಿದಂ? ಬಂದಿರ್ದ ಬಾಧೆ ತಾಂ ಹರಿದಿರ್ದುದಂ ಮತ್ತವಳನೀ ವರ್ತಕರ್ ಕೊಂಡಾಡುತಿರ್ದುದಂ? ಸಹಜಚಂಚಲೆ ಬಾಲೆ ತಾಂ ನಿಚ್ಚಟದ ಭಕ್ತಿಯೊಳ್ ಚಿತ್ತಜಾರಿಯಂ ನೆನೆನೆನೆದು ತಾನರಿಯದಾ ಭಕ್ತಿಯೋಗದೊಳೀಶನಂ ಧ್ಯಾನಿಸುತೆ ಮೈಮರೆದುಬಿದ್ದಳಲ್ಲೆ ಈಶ್ವರಾರ್ಪಿತ ಕುಸುಮದಂತೆ. ಸಂತಸದ ಕೋಲಾಹಲವನಾ ವೃದ್ಧವರ್ತಕಂ ನಿಲ್ಲಿಸುತೆ ಯೋಗಿಣಿಯ ಶೈತ್ಯೋಪಚಾರಮಂ ತೊಡಗಿರಲ್ ಘಳಿಗೆಗಳ್ ಕಳೆಕಳೆದು ಮಹಾರಾಣಿ ಕಣ್ದೆರೆವ ಕಾಲದೊಳ್ ಕೋಗಿಲೆಯ ಸಿಡುಸರಂ ಕೇಳಿಸಿತು; ತೆಂಗಾಳಿತೀಡಿತ್ತು ಉದಯಾದ್ರಿ ಕೆಂಪಡರೆ ಗಗನಾಂಗಣದಿ ದಿನಪ ತಾಂ ಮೂಡಿದಂ ನಂದಿದಾಶೆಯ ಜ್ಯೋತಿಯುಂ ಹೃದಯದೊಳ್ ಮೂಡಿಸಿದ ತೆರದಿ. ಪರಿವಾರ ಪರಿವೇಷ್ಟಿತೆಯೆ ತಾನಾಗಿ ಮಲಗಿರಲ್ ದಮಯಂತಿ ತಾಂ ಮೇಘಮಂಡಲದಂಚಿನೊಳ್ ಬಾಲಾರ್ಕನೆದ್ದು ಮೇಲೇರೆ ಸರಸಿಜಂ ಬಿರಿದರಳಿ ಸೌರಭವ ಸೂಸುತ್ತೆ ತನ್ನಿರವನೊರೆವ ತೆರದಿಂದೆ ಕಣ್ತೆರೆದು ಮೇಲೆದ್ದು ಮುಂಗುರಳನೋಸರಿಸಿ ದೈವಲೀಲೆಯುಂ ಕಾಣುತುಲ್ಲಸದಿ ನಸುನಕ್ಕು ಗಿರಿಜೇಶನಂ ಧ್ಯಾನಿಸುತೆ ವೃದ್ಧನಂ ವಂದಿಸಲ್ ಮತ್ತುಳಿದ ವರ್ತಕರ್ ಭಕ್ತಿಯಿಂದಭಿನಮಿಸಿ ಸಾಧ್ವಿಯುಂ ಪೊಗಳಿದರ್ ಪ್ರಾಣಂಗಳಂ ಪಾಲಿಸಿದ ಮಹಾದೇವಿಯೆಂದು.

ಸಂತಸದ ಸೂರ್ಯೋದಯಂ ಮತ್ತೆಲ್ಲರೆದೆಯನಾವರಿಸಿ ತುಂಬಿ ಬರೆ ಮುಂದಿನುದ್ಯೋಗಮಂ ನೆನೆಯುತ್ತೆ ಶಿಬಿರಮಂ ಕೀಳುತಲ್ಲಿಂ ನಳ ನರಸಿಯನ್ನೊಡಗೊಂಡು ಹರದರೆಲ್ಲರು ಮುನ್ನಡೆದರಾರಣ್ಯದೊಳ್ ಪಯಣಮಂ ಸಾಗಿಸುತೆ ಮುಂದೆ ಮುಂದೆ. ಹಸಿದಲ್ಲಿ ನಿಲ್ಲುತಡಿಗೆಯಂ ಮಾಡಿ, ಭೋಜನವ ತೀರಿಸುತೆ ಹೊತ್ತಿಳಿಯೆ ಸುಸ್ಥಳದಿ ಢೇರೆಗಳನಿಕ್ಕಿ ವಿಶ್ರಾಂತಿಯಂ ಪಡೆಯುತ್ತೆ ಮತ್ತೆದ್ದು ಕಾಡಿನೊಳ್ ಹರನ ನೆನೆನೆನೆದು ನಡೆಯುತ್ತೆ ಮೂರ್ ದಿನಂಗಳಂ ಕಳೆದು ಸಂಜೆಯೊಳ್ ಚೇದಿರಾಜ್ಯದ ಗಡಿಯನಾಡಂ ಸೇರ್ದೊಂದು ಗ್ರಾಮದೊಳ್ ಬೀಡುಬಿಟ್ಟು ಮರುದಿನಂ ಮುಂಬಿಸಿಲು ಸೂಸುತಿರೆ ಹಿರಿಯುವರ್ತಕಂ ತನ್ನ ಪರಿವಾರದಿಂದಾರಿಸುತೆ ನಾಲ್ಕು ಸುಜನರಂ ಕರೆದವರ ಜತೆಗೂಡಿ ಮಣಿದ ದಮಯಂತಿಯಂ ಹರಸಿ ಕಳಿಪಿದಂ ಮತ್ತವಳ ಬಯಕೆಯೊಲ್ ಚೇದಿರಾಜ್ಯದ ಮಹಾ ಪಟ್ಟಣಕ್ಕೆ. ಮನ್ನಣೆಯನಿತ್ತಾದರಿಸಿ ನಾಲ್ ದಿನಂ ಪೊರೆದಿರ್ದ ಜನ್ಮಾಂತರದ ಬಂಧುಗಳ ಬೀಳ್ಕೊಂಡು ತಿರುತಿರುಗಿ ಮತ್ತವರನೀಕ್ಷಿಸುತೆ ಮುನ್ನಡೆವ ಸಾಧ್ವಿಯಂ ತುದಿಕಾಲ ಮೇಲ್ ನಿಂತು ವೃದ್ಧವರ್ತಕಂ ಕತ್ತೆತ್ತಿ ನೋಡುತ್ತೆ ನೋಡುತ್ತೆ ಮತ್ತಾಕೆ ಕಾಣದಿರೆ ನಿಟ್ಟುಸಿರ ಸೂಸುತ್ತೆ ಕುಳ್ಳಿರಲ್ ನೆನೆಯಲಾಕೆಯ ಕಷ್ಟಮಂ ನಿಷಧೇಂದ್ರನರಸಿ ತಾಂ ನಡೆದಳೊಯ್ಯನೆ ಮುಂದೆ ದುಗುಡದಿಂ ಪತಿಯ ನೆನೆನೆನೆದು. ತನ್ನಂಬೆಯನುಜೆಯಂ ಕಾಂಬೆನೆಂಬಾತುರದಿ ಹರದರಂ ಕೂಡುತ್ತೆ ಹೆದ್ದಾರಿಯೊಂದಂ ಪಿಡಿದು ಸಾಗಿ ಹೊತ್ತೇರಿ ಘಳಿಗೆಗಳ್ ಹತ್ತಾಗೆ ಸುದತಿ ತಾಂ ಭರದಿಂದೆ ಕ್ರಮಿಸುತ್ತೆ ದಾರಿಯಂ, ಮತ್ತದೊ ಕಂಡಳನತಿದೂರದೊಳ್ ಕಂಗೊಳಿಪ ಬಗಬಗೆಯ ಶೃಂಗಾರದಿಂದಲಂಕೃತಿಯಗೊಂಡಿರ್ಪ ಚೇದಿರಾಜ್ಯದ ನಗರಮಂ ಮೇಣದರ ವಿಭವೋನ್ನತಿಯ ಕೀರ್ತಿಕಳಶಂಗಳಂ. ಮತ್ತಲ್ಲಿನಿಂದಾಕೆ ತನ್ನಂವೆರಸಿ ಬಂದಿರ್ದ ಹರದರಂ ಕೈಮುಗಿದು ಬೀಳ್ಕೊಟ್ಟು ಮುನ್ನಡೆದು ಕೋಂಟೆಯಂ ದಾಂಟುತ್ತೆ ಸುತ್ತಾಡಿ ಬೀದಿಯೊಳ್ ಸುಳಿಸುಳಿದು ರಾಜಭವನದ ಮುಂದಿರ್ದ ಪುಷ್ಪವಾಟಿಯ ಕೊಳದಿ ಮಜ್ಜನಕ್ಕೆ ಮನಮಾಡೆ ಪಹರಿಗಳ್ ತಡೆಯುತಿರೆ ಭ್ರಾಂತೆ ಎಂದಾಕೆಯಂ ಬೆನ್ನಟ್ಟಿ ಬಂದಿದ್ದ ಬಾಲಕರ್ ಕಲ್ಲುಗಳನೆಸೆದು ಚೇಷ್ಟೆಯಂ ತೊಡಗಿರಲ್ ಮೇಲೆತ್ತರದ ಚಂದ್ರಶಾಲೆ

ಯೊಳಿರ್ದುದ ತನ್ನಣುಗಿಯಂ ಕಯ್ಯಾರೆ ಪಸದನಂಗೊಳಿಪಾ ರಾಜ್ಯದರಸಿ ತಾಂ ಕಾಣುತೀ ಮರುಳಾಟದಾಟೋಪಮಂ, ಮನಕರಗಿ ದೂತಿಯನ್ನಟ್ಟಿ ಕರೆಸಿದಳ್ ಶೋಕಾಕುಲಿತವಿಭ್ರಾಂತೆಯಂ ಸಾಧ್ವಿ ದಮಯಂತಿಯಂ ಬಂದೊಡನೆ ಕಾಲ್ಗೆರಗಿ ನಿಂದಿರ್ದ ಚಂದ್ರಾನನೆಯ ದಿಟ್ಟಿಸುತಲೀ ಪುರದ ರಾಣಿ ತಾಂ ಕೇಳಿದಳ್ ಕನಿಕರಿಸಿ ಮತ್ತವಳ ವೃತ್ತಾಂತಮಂ. ಕಿರುಜನನಿಯೆಂದರಿದಿರ್ದೊಡಂ ನಿಷಧೇಂದ್ರನರಸಿ ತಾಂ ಪೇಳಿದಳ್ ವೃದ್ಧವರ್ತಕನ ಮುಂದೊರೆದ ತೆರದಂದೆ, ತನ್ನೂರು ಹೆಸರುಗಳ ಮಾತ್ರ ಹುಸಿಯುತ್ತೆ ಮತ್ತೆಲ್ಲವಾದ್ಯಂತವಾಗಿ. ಕೇಳುತಾ ಮಾತುಗಳ ಚೈದ್ಯೇಶನರಸಿ ತಾಂ ಛೀಗಳೆಯುತಿವಳ ನಲ್ಲನಂ ದೂರಿದಳ್ "ಪಾಪಾತ್ಮನಾ ಜೂಜುಗಾರಂ ಮಡದಿಯಂ ಗೊಂಡಾರಣ್ಯದೊಳ್ ಬಿಟ್ಟು ನಡೆದವಂ ನೀಚನೆ"ಂದು. ಪತಿದೂಷಣೆಯನಾಲಿಸದೆ ದಮಯಂತಿ ತಾಂ ತನ್ನೆರಡು ಕಿವಿಗಳಂ ಕೈಯಿಂದೆ ಮುಚ್ಚಿ ಶಿವಶಿವ ಎಂದುದ್ಗಾರವಂ ತೆಗೆದು ರೋದಿಸುತೆ ನುಡಿದಳಿಂತು: "ದೇವಿ ಮಹಾರಾಣಿ, ನೀಂ ತಿಳಿದವಳು. ಕೇಳ್ದರಿಯೆಯಾ ಹದಿಬದೆಯ ಧರ್ಮಮಂ? ಪತಿನಿಂದೆಯಂ ಕೇಳಲಪ್ಪುದೆ ಪೇಳ್. ಎನಗೆನ್ನಪತಿಯೆ ಪರದೈವಂ. ನೀನೆನ್ನ ಕರೆಸಿರ್ಪೆ ಕನಿಕರದಿ, ನನ್ನ ದುಃಸ್ಥಿತಿಯ ಕಾಣುತರಸನಂ ದೂಷಿಸುವೆ; ಮತ್ತೆನಗಾಗಿ ಮರುಗುತಿಹೆ. ತಾಯೆ ನಿನ್ನ ಸನ್ನಿಧಿಗೆ ನಾಂ ಬಂದುದೇ ತಪ್ಪಾಯ್ತು. ಮನ್ನಿಸೆನ್ನಂ. ಇನ್ನಾದರೆನಗನುಜ್ಞೆಯಂ ಪಾಲಿಸುತೆ ಕಳುಹೆನ್ನ ದೇವಿ" ಎಂದೆನುತೆ ಬಿಕ್ಕಿ ಬಿರಿದಳುತೆ ಮೇಲೇಳಲಾ ಸಾಧ್ವಿಯಂ ಕೈವಿಡಿದು ಕುಳ್ಳಿರಿಸಿ "ಗುಣಮಣಿಯೆ ಕೇಳ್, ನಿನ್ನಂ ಪರೀಕ್ಷಿಸಲ್ ದೂರಿದೆಂ ನಿನ್ನರಸನಂ. ಬೇಸರಂಗೊಳ್ಳದಿರು. ಕ್ಷಮಿಸೆನ್ನ. ಸಾಧ್ವಿ ನೀಂ ಎಲ್ಲಿರ್ದರೇನಂತೆ. ದೂತರನ್ನಟ್ಟಿ ನಿನ್ನರಸನಂ ಕರೆಸುವೆಂ. ಮರುಗದಿರು ಮಗಳಾದ ಸುನಂದೆಯಂವೆರಸಿ ಸುಖದೊಳಿರು." ಎನುತಾಕೆಯಂ ಸಂತೈಸಿ ಸೀರೆಕುಪ್ಪಸಂಗಳನಿತ್ತು ಪೊರೆದಳಾ ಚೈದ್ಯೇಶನರಸಿ ತಾಂ ತನ್ನಗ್ರಜೆಯ ಮಗಳೆಂಬುದಂ ಗುರುತಿಸದೆ ತಾಯ್ತನದ ಕರುಳಿನಿಂದೆ.

ನೃಪವರೇಣ್ಯನಾ ನಿಷಧಾಧಿಪಂ ನಿಜರಮಣಿಯನ್ನರಣ್ಯದೊಳ್ ಬಿಟ್ಟಗಲಿ ನಡೆದವಂ ಕಾಡಿನೊಳ್ ನಡೆದಿರ್ದನಂದು ಬಹುದೂರದೂರಮಂ ಒಗೆಯೊಳಗೆ ಭಾವಿಸುತೆ ಬಗೆಬಗೆಯ ಭಾವಮಂ, ಬಾಹುಜ

ಕುಲೋತ್ತಂಸ ತಾಂ ಬಳಲ್ಕೆಯುಂ ಬಗೆಗೊಳದೆ. ರಾತ್ರಿಯೊಳ್ ಕಾಡಿನಾ ಮರದಡಿಯೆ ಮಲಗಿ ಮರುದಿನಂ ಮರುಳನಂತಾ ನೃಪಾಲಕಂ ಕಾನನದಿ ಕಂಡ ದಾರಿಯ ತುಳಿತುಳಿದು ತೊಳಲುತ್ತೆ ನಡೆಯುತಿರ್ದಂ ಕಣ್ಣಿರ್ದು ಕುರುಡನಂತೆ. ನಿಸರ್ಗರಮಣೀಯತೆಯನಾಂತಿರ್ದ ವಿಪಿನದೊಳ್ ಮರಗಿಡಂಗಳ ಬೆಡಗುಗಳ್ ಗಾಳಿಯೊಳ್ ಪರಿಮಳವ ತೂರುತಿಹ ಪೂವುಗಳ್ ಪೂವಿಡಿದ ನಾನಾತೆರದ ಬಳ್ಳಿಗಳ್ ಸ್ವಚ್ಛಂದತೆಯೊಳಾನಂದ ಗೀತವಮಂ ಪಾಡುತಿಹ ಪಕ್ಷಿಗಳ್ ಮತ್ತುಲ್ಲಸದಿ ಕುಣಿದಾಡುವಾ ವನ್ಯ ಮೃಗಂಗಳ ವಿತತಿಗಳ್ ಮೇಳೈಸಿ ತಾಂ ಸುಖಸೌಂದರ್ಯ ಪೀಯೂಷವಂ ಚೆಲ್ಲುತಿರೆ ಕಾಣುತೆಲ್ಲಮಂ ನಡೆಯುತಿರ್ದಂ ನಳಂ, ಸಂತಾಪದಿಂ ಸೊರಗಿ ಹಿಪ್ಪೆಯಾಗಿರ್ದೊಡಲ ಭಾರಮಂ ಪಡೆದು ತಾನು. ನೊಂದೆದೆಗೆ ಶಾಂತಿಯುಂ ಬೀರುತರಣ್ಯದೊಳ್ ಪ್ರಕೃತಿ ತಾಂ ಮರ್ತ್ಯದೊಳ್ ಅಮೃತತ್ವಮಂ ಪಾಲಿಸುತೆ ಸಹಸ್ರಾರು ಸಂಯಮಿಗಳಂತಶ್ಚಕ್ಷುವಂ ಬಿರಿಯುತಾತ್ಮಾನಂದವಮಂ ಮೇಣ್ ಸಾಧಿಸುವ ಯೋಗಂಗಳಂ ಕರುಣಿಸುತೆ ಕೈವಲ್ಯಕಾರಣಳ್ ತಾನಾಗಿ ಮೆರೆದೊಡೇಂ? ನಳನೃಪನ ಭಾಗ್ಯವೇ? ಮಡದಿಯುಂ ಬಿಟ್ಟವಳ ಕಷ್ಟವಂ ಮರೆವೆನೆಂಬಾಶೆಯೊಳ್ ನಡೆದಿರ್ದೊಡೇಂ ತೊರೆಯಲಪ್ಪುದೆ ಪ್ರೇಮಮಂ, ಪ್ರೇಯಸಿಯ ಸ್ಮರಣೆಯುಂ? ನೆನೆನೆನೆದು ತನ್ನರಸಿಯುಂ ಚಿಂತಿಸುತೆ ಕಣ್ಣೀರ ಸುರಿಸುತಿರೆ ವಿರಹ ತಾಂ ಪೆರ್ಚಿಸಿತ್ತವನೆದೆಯ ಸ್ವರ್ಗೀಯಪ್ರೇಮಮಂ. ಮಿಲನದೊಳ್ ಮಂದಗತಿಯೊಳಗಿರ್ದ ಪ್ರೇಮತಾಂ ವಿರಹದಿಂದುದ್ದೀಪ್ತಮಾದಂತೆಯೇ ಪ್ರೇಮಪಾಶದಿ ಮನಂ ಬಿಗಿದಿರಲ್ ಮತ್ತೊಡಲನಾ ವಿಧಿಯ ಸೂತ್ರಂ ಬಂಧಿಸಲ್ ಕರ್ತರ್‍ಯಾಕ್ರಮುಕಸ್ಥಿತಿಯನಾಂತಿರ್ದ ನವನೀಶನು. ಹೊತ್ತೇರುತಿರೆ ಬಾನಿನೊಳ್, ನಡೆಯುತಿರ್ದಂ ನಳಂ ನಟ್ಟಡವಿಯೊಡಲಂ ಪೊಕ್ಕು ಧ್ರುವತಾರೆಯಂ ಕಾಣದಾ ನಾವಿಕನತೆರದಿ. ಆಹಾರ ನಿದ್ರೆಗಳ ಬಾಧೆ ತಾಂ ಮಾನವಗೆ ಸಹಜಮಾಗಿರ್ದೊಡಂ ದಮಯಂತಿಯರಸ ತಾಂ ಮರೆದಿರ್ದನವುಗಳಂ ಮೇಣ್ ಬಾಹ್ಯಮಂ. ಚಿಂತಿಸುತೆ ತನ್ನಿನಿಯಳಂ ಮತ್ತವಳ ತಾಂ ಬಿಟ್ಟೋಡಿ ಬಂದಿರ್ದುದಂ ಸುಭೋಜ್ಯಭೋಜನಂಗಳ ಭಾಗ್ಯಮಂ ಕಳೆದು ಬಂದಿರ್ದೊಡೇಂ? ಹಣ್ಣಿಲ್ಲವೇಂ ಕಾಡಿ

ನೊಳ್? ನೀರಿಲ್ಲವೇಂ ಝುರಿಗಳೊಳ್? ಇರ್ದೊಡೇಂ? ಹಸಿವು ತೃಷೆಗಳ ನರಿವನೇ ನಳನೃಪಂ? ವಿಧಿವಶದಿ ಬಂದಡಸಿರ್ದ ಬಡತನದ ದುಃಖಾಗ್ನಿ ಬೇಗೆಯೊಂದು, ಪೂರ್ವ ಜನ್ಮದ ಕರ್ಮಫಲದಾ ಭಾಗ್ಯವಶದಿಂ ತನ್ನನೊಡಗೊಂಡು ಬಂದಿರ್ದ ಮಡದಿಯಂ ತಾನೆ ಕಾನನದಿ ಕೈಬಿಟ್ಟು ಬಂದಿರ್ದ ಶೋಕವಿನ್ನೊಂದು, ಸ್ವರ್ಗಾಧಿಪನ ಪ್ರೇಮಮಂ ಧಿಕ್ಕರಿಸಿ ತನ್ನನೊಲಿದಿರ್ದಾಕೆಯಂ ತ್ಯಜಿಸಿರ್ದ ವಿರಹ ತಾಂ ಬೇರೊಂದು. ತಾಳ್ವನೆಂತೀ ತೆರದ ತ್ರಿವಿಧ ಸಂಕಟವನಾ ಭೂವರಂ? ನೊಂದು ಬೆಂದಿರ್ದೊಡಲಿನಂತರ್ಯದೊಳ್ ಬೇರೂರಿ ಭಾವಗಳ್ ಕಣ್ಣೀರ ಸೇಚನದಿ ನಿಟ್ಟುಸಿರ ಗಾಳಿಯುಲಿ ಬಳೆ ಬಳೆದು ವಿಶಾಲ ಹೃದಯಮಂ ತುಂಬಿಬರೆ ಮಹಾರಾಜನಾದೊಡಂ ಭ್ರಾಂತನಪ್ಪುದು ಸಹಜಮಲ್ತೆ? ತಾನುಟ್ಟಿರ್ದ ತನ್ನವಳ ಸೀರೆಯಂ ದಿಟ್ಟಿಸುತೆ ಕಣ್ಗಳಿಗೊತ್ತುತ್ತೆ ಮೇಣಾಘ್ರಾಣಿಸುತೆ ತನ್ನೆರಡು ಕೈಗಳಿಂ ಪಿಡಿದದುಮಿ ಹಿಂಡುತ್ತೆ ಮತ್ತದನೆ ಕೊಡಹುತ್ತೆ ಬಾಯ್ಗಿಟ್ಟು ತುದಿಯ ಜಗಿಯುತ್ತೆ ಬಿಚ್ಚಿ ಹೊದೆಯುತ್ತೆ ಸುರುಟಿ ಕಕ್ಷದೊಳ್ ತುರುಕುತ್ತೆ ದಟ್ಟಿಯಂಗೈದುದರಮಂ ಬಿಗಿಯುತ್ತೆ ಮತ್ತಂತೆಯೇ ನಡುವಿನೊಳ್ ಸುತ್ತಿ ಧರಿಸುತ್ತೆ ನಡೆಯುತಿರ್ದಾ ನಳಂ ಬೆಂಗಾಡ ಹಂಸದಂತೆ. ನಡೆಯುತಡಿಗಡಿಗೆ ನಿಲ್ಲುತಾಲಿಸುತೆ ತನ್ನೆರಡು ಕೈಗಳಿಂ ಹಿಸುಕುತ್ತೆ, ಕೂದಲಂ ಕೆದರಿ ತುರಿಸುತ್ತೆ ಮತ್ತೊರ್ಮೆ ಕುಳಿತಲ್ಲಿ ಒಣ ಕಡ್ಡಿ ದರಗುಗಳ ರಾಶಿಯನ್ನೊಟ್ಟುತ್ತೆ ಮತ್ತೆದ್ದು ಕಾಲಿನೊಳ್ ಹಾರಿಸುತೆ ಕೋಲ್ಮುರಿದು ಮರಗಳಂ ಬಡಿಬಡಿದು ನಡೆಯುತಿರ್ದಂ ಭಾರ್ಯೆಯಂ ಬಿಟ್ಟಿರ್ದ ಭ್ರಾಂತಿಯಿಂದೆ. ಪೂರ್ವದೊಳ್ ಕಾಲಕಾಲಂ ವಿಲಯರುದ್ರಂ ಫಾಳಾಕ್ಷನಾ ದಕ್ಷಸುತೆಯುಳಿವಿನಿಂ ಕಂಗೆಟ್ಟು ತಪದಿ ನಿಂದಿರ್ದನೆನೆ ಪ್ರಾಪಂಚಿಕಂ ನಳನೃಪಂ ಮನುಜನಲ್ತೆ. ಹರಿಣಿಯಂ ಕಂಡೊಡನೆ ನಯನಮಂ ದಿಟ್ಟಿಸುತೆ ಹೆಮ್ಮರನ ಬಳಸಿರ್ಪಳೆಯ ಲತೆಗಳಂ ಪಿಡಿದಾಡಿಸುತೆ ಪಲ್ಲವಂಗಳನೆಳೆದೆಳೆದು ಮುದ್ದಿಸುತೆ ಶುಕಪಿಕಂಗಳುಲಿಯುತಿರೆ, ಕಂಠಮಂ ಕೇಳ್ದು ಮೈಮರೆದು ದಮಯಂತಿಯಂ ಕರೆಕರೆದು ಮರುಗುತ್ತೆ ಕ್ರಮಿಸುತಿರ್ದಂ ವಿಪಿನದೊಳ್ ಭೂವರಂ ಕಳೆದಾಯುವಂ ನೆನೆದು ಕೊರಗುವ ವೃದ್ಧನಂತೆ. ಅನಿತರೊಳ್ ಘೋರಾ

ರವದಿ ನಳನೃಪನ ಹೆಸರೆತ್ತಿ ಕೂಗಿದಂತಿವಗೆ ಕೇಳಿಸಿತ್ತತಿದೂರ ದೂರ
ದೊಳ್ ಕಾನನದ ಮಧ್ಯದಿಂ ಮೇಲೆದ್ದು ಶೋಕದುದ್ವೇಗದೊಳ್
ರೋದನಂ. ಕಾದೆಲರ ಮೇಲಿನಿಂ ತೇಲಿ ಬಂದು ತಡೆಯಿಲ್ಲದೊಂದೇ
ಕ್ರಮದೊಳಾಕ್ರಂದನಂ ಕೇಳಿ ಬರೆ ಭೂವರಂ ತಾಳುತೆಚ್ಚರವನಾಕ್ಷಣದಿ
ಬೆಚ್ಚುತಚ್ಚರಿಯೊಳೋಡಿದಂ. ಮುಂದೋಡುತೋಡುತೆ ನೋಡಿದಂ
ತನ್ನೊಡಲನಾ ವಿರಹಾಗ್ನಿ ಸುಟ್ಟುರಿಪ ತೆರದಿಂದೆ ಕಾಳ್ಕಿಚ್ಚು ಹುಚ್ಚೆದ್ದು
ಕಾನನವ ದಹಿಸುತಿರಲು, ಮತ್ತಾ ಬಳಿಯೆ ಸುಳಿವ ಪ್ರಾಣಿಗಳ್ ಬೇ
ಯುತ್ತೆ ಸಾಯುತಿರಲು. ಸಮರ ಭೈರವ ಲೀಲೆಯಂ ತೋರುತಡಿಗಡಿಗೆ
ರುದ್ರಾಗ್ನಿಜ್ವಾಲೆ ತಾಂ ಮೃತ್ಯು ಚಿಹ್ನೆಯ ತೆರದೊಳಾ ಅರಣ್ಯಮಂ ಬಳಸಿ
ಗಿಡಗಳಂ ಪೊದೆಗಳಂ ಮರಗಳಂ ಮೆಳೆಗಳಂ ಮೇಣ್ ತೃಣಕಾಷ್ಠ ಸರ್ವ
ಮಂ ನೆಕ್ಕಿ ನೊಣೆನೊಣೆದು ಮೇಲ್ವಾಯ್ದು ಗಗನಮಂ ತುಡುಕುವಾತುರದಿ
ಕರ್ಬೊಗೆಯ ಕೇತುವನ್ನೆತ್ತರಕೆ ಹಾರಿಸುತೆ ಸುಳಿಸುಳಿದು ಕೆನ್ನೀರ ಕಾರಂ
ಜಿಯೊಲ್ ಚಿಮ್ಮಿ ನೆಗೆಯುತಿರ್ದುದು ಮೇಲೆ, ಭೂಮಿಯಿಂದಾಗಸಕೆ
ಹಾರುವಗ್ನಿಯ ವೃಷ್ಟಿಯಂತೆ. ಸಿಮಿಸಿಮಿದು ಕಾನನಂ ಸುಟ್ಟುರಿಯುತಿರೆ
ಮುಳ್ಳಿಡಿದು ಬೆಳೆದು ನಿಂದಿರ್ದ ಬಿದಿರ ಹಿಂಡುಗಳ್ ಹೊತ್ತುತಾಸ್ಫೋ
ಟನಂಗೊಂಡು ಮೇಳೈಸಿತಾ ಪ್ರಳಯನಿನದಂ ಸುಟ್ಟುರಿದು ಬುಡದಿಂದೆ
ಮಹೀರುಹಂಗಳ್ ದಿಂಡುರುಳಿ ಭೂಮಿಯೊಳ್ ಬೀಳ್ವನ್ನೆಗಂ ತಡೆದು
ನಿಂದಿರ್ದ ಮರಗಳಂ ಮುರಿಮುರಿದು ಕೆಡೆಗೊಂಡ ವಿಲಯ ತಾಂಡವರ
ವಕೆ ತಾಳವಾಗಿ; ಸೌಂದರ್ಯದಾನಂದಮಂ ಬೀರುತಿಹ ವಿಂಧ್ಯಾದ್ರಿ ತಾಂ
ವಿಪಿನಸೌಭಾಗ್ಯಮಂ ಕಿಚ್ಚೊಟ್ಟಿಸುಡುವ ಸೂಡಂಪೋಲ್ದು, ವನದೊಳಗೆ
ನಿತ್ಯಾಶ್ರಯಂಗೊಂಡು ನೆಲಸಿರ್ದನಿತೆನಿತೋ ಜೀವರಾಶಿಗಳ್ ಪಟಪಟನೆ
ಬಿದ್ದುರುಳಿ ಸಾಯುತಿರೆ ಮತ್ತೆನಿತೆನಿತೊ ಚೀರಿಟ್ಟಳುತೆ ಬೊಬ್ಬಿರಿಯು
ತೋಡುತಿರೆ ಮಸಣಭೂಮಿಯತೆರದಿ ಪೈಶಾಚಕುಲಕೋಟಿಯುಬ್ಬಟೆಯು
ನಾಂತಿರ್ದು ರುದ್ರಭೀಕರಮಾಗಿ ಕಲ್ಪಾಂತಕೋಲಾಹಲದಿ ಕಾಮಾರಿ
ಯಂ ಮಿರಿಸಿತ್ತು. ಮುಂಗಾರ ಮೇಘಗಳಹಾರಿಸುತೆ ಭರದಿಂದೆ ಬಿರುಗಾಳಿ
ಬೀಸುತಿರಲನ್ನೆಗಂ ಸಾಗರಂ ಹುಚ್ಚೆದ್ದು ನರ್ತಿಸುವ ತೆರದಿಂದೆ ನೆಗೆನೆಗೆದು
ಕನಕನಿಕ್ಷೇಪಮಂ ಪಡೆದಿರ್ದ ಕಡು ಬಡವನೊಲ್ ಸಪ್ತಾರ್ಚಿ ತಾಂ

ವಿಪಿನವುಂ ನೊಣೆನೊಣೆದು ಕುಣಿಯುತಿರೆ ನೆಟ್ಟದಿಟ್ಟಿಯೊಳೀಕ್ಷಿಸುತೆ
ನಳನೃಪಂ ಬೆರಗುವಟ್ಟಿರ್ದನಂತೆಯೆ ತಾಂ ಕೇಳುತೋಡೋಡಿ ಬಂದಿರ್ದ
ಶೋಕಾರ್ತಧ್ವನಿಯನಾಕರ್ಣಿಸುತೆ ಚಿಕ್ಕಸದಿ ಮೇಲೆತ್ತರಕೆ ಕಣ್ಣಾಲಿಗಳ
ಹೊರಳಿಸುತೆ ನೋಡಿದಂ ಆ ಬಳಿಯ ವಟಕುಜಾಗ್ರದೊಳೊಂದು
ಘೋರಾಹಿ ತಾಂ ದಳ್ಳುರಿಯ ಜ್ವಾಲೆಯೊಳ್ ಬೆದೆಬೆಂದು ಕಂಠಗತ
ಪ್ರಾಣದಿಂ ಬೊಬ್ಬಿರಿಯುತಿರಲು ರಕ್ಷಣೆಗೆ ತನ್ನನೇ ಕೂಗಿ ಕರೆಯುತಿರಲು.
ಮಹೋರಗಂ ಮನುಜರೊಲ್ ರೋದಿಸುತೆ ತನ್ನಂ ಕರೆಕರೆದು ಗಳ
ಬಿರಿಯೆ ಮತ್ತೇನೇನೋ ನುಡಿಯುತಿರೆ ತಾಳಿದಚ್ಚರಿಯೊಳಾ ನೃಪವ
ರೇಣ್ಯಂ ಕೇಳಿದಂ "ನೀನಾರು? ನಳನುನಾಂ ಮತ್ತೆನ್ನೊಳೇಂ ಕಜ್ಜಮೆಂ"
ದು. ನುಡಿಗೆ ಮರುನುಡಿಯ ಕೇಳ್ದೊಡನೆ ಪನ್ನಗಂ "ನಳನೃಪಾಲಕನೆ
ನೋಡಿಲ್ಲಿ ನನ್ನ ದುರ್ದಸೆಯನೀಂ. ಮೈಯೆಲ್ಲ ಬೆಂದು ಸಾಯುತಿಹೆನಾಂ.
ಬಿಡಿಸೆನ್ನ ಪ್ರಭೋ. ನಿನ್ನುಪಕಾರಮಂ ನೆಮ್ಮಿ ಪ್ರಾರ್ಥಿಪೆಂ: ಬಂಧನವ
ಹರಿಸೆನಗೆ ದಳ್ಳುರಿಯ ಜಾಲೆಯೊಳ್ ಸಿಕ್ಕು ಸೀಗುರಿಗೊಂಡು ತೊಳಲು
ತಿರ್ಪೆನ್ನ ನೀಂ ಪತಿಕರಿಸಿ ಪ್ರಾಣದಾನಮಂ ನೀಡೆನಗೆ. ಶರಣ ನಾಂ ಕರು
ಣಿಯೆ! ರಕ್ಷಿಸೆನ್ನಂ ರಕ್ಷಿಸೆ"ಂದೊರಲಿ ಬೇಡುತಿರೆ ಕರಗಿತಾ ಭೂವರನ
ಹೃದಯಂ ಭೂತದಯೆಯಭ್ಯಾಸದಿಂದೆ. ಸ್ವಸ್ಥಾನ ತನಗಿಲ್ಲದಾಹಿಮಕರಂ
ಶಿವನ ಶಿಖೆಯನ್ನಡರಿರ್ದೊಡಂ ಏಣಾಂಕನೆಂದೆಂಬ ಬಿರುದಂ ಬಿಟ್ಟಿರ್ದ
ನೇಂ? ಮತ್ತಾ ಪೆರಿಯ ಪೆಸರಾಂತ ವಂಶವಾರಿಧಿಯ ಸೋಮನೀನಳ
ನೃಪಂ ಮರೆವನೇ ತನ್ನಾದಿ ಗುಣಗಣಂಗಳ ಹಿರಿಮೆಯುಂ? ಬಡತನಂ ಬಂದ
ದಸಿ ನೊಂದಿರ್ದ ಹೃದಯತಾಂ ವಿರಹದುರಿಯಿಂದೆ ಬೆಂದಿರ್ದೊಡಂ,
ಕಾರುಣ್ಯಜಲಪರಿಪೂರ್ಣಮಾನಸಂ ತನ್ನಿರವ ಮರೆತನಂತೆಯೆ ಮರು
ಗಿದಂ ಮೃತ್ಯುಪಂಜರ ಮಧ್ಯದೊಳ್ ಬಿದ್ದಿರ್ದ ನಾಗನಂ ನೋಡಿನೋಡಿ.
ನೋಡನೋಡುತೆ ಹವ್ಯವಾಹನನ ವರದ ಬಲದಿಂದೆ ಭೂಲಲಾಮಂ
ಮುನ್ನುಗ್ಗುತಗ್ನಿಯೊಳ್ ಧಾವಿಸುತೆ ವಟವೃಕ್ಷಮೂಲಮಂ ಸೇರ್ದೊಡನೆ
ತನ್ನುಡಿಯುನೆರಡು ಕೈಯಿಂ ಪಿಡಿದೆತ್ತಿ ಮತ್ತುರಗನಂ "ಹಾರು ನೀನೀ
ಬಟ್ಟೆಯೊಳ್. ಪೊರೆವೆನಾಂ; ಬೆದರದಿರು ನೀನೆ"ಂದು ಧೈರ್ಯಮನ್ನೊರೆದು
ಕರೆಯುತಿರೆ ಪನ್ನಗಂ ಹಾರಿತಾತನ ಘೌತದೊಳ್ ಜೀವಾಭಿಲಾಷೆಯಿಂದೆ.

ಮತ್ತೊಡನೆ ಪನ್ನಗನ ತನ್ನರಿವೆಯೊಳ್ ಮುದುಡಿಸುತೆ ತಂಪಾದ ಸುಸ್ಥಳದಿ ತಂದಿಳಿಸಿದಂ ಬಂಧನವ ಹರಿಸಿದಂ ಭಾಗ್ಯನಿಧಿ ಭೂಪಾಲನು. ತನ್ನಸುವ ಲೆಕ್ಕಿಸದೆ ತಾಂ ಸತ್ಯಧರ್ಮಂಗಳಂ ನಂಬಿ ವಿಷದುರಗನಂ ಪತಿಕರಿಸಿ ಪೊರೆದಿರ್ದೊಡಂ ಬಿಡುಗಡೆಯಗೊಂಡಿರ್ದ ಘೋರಾಹಿ ತಾಂ ಹೆಡೆಯೆತ್ತಿ ಕಡಿಯಲ್ಕೆ, ಪೊಡವೀಶ ತಾನುರುಳಿ ಬಿದ್ದಂ ಕಲ್ಪತರು ಕೆಡೆದು ಬಿದ್ದಿರ್ದ ತೆರದಿ. ಕಾಳಾಹಿ ಕಚ್ಚಿರ್ದ ವಿಷದುರಿಯ ತಾಳಲಾರದೆ ನಳಂ ಕೈ ಕಾಲ್ಗಳಂ ಬಡಿಬಡಿದು ಬಾಯಿಂದೆ ಬೆಳ್ನೊರೆಯ ಕಾರುತ್ತೆ ಬಿದ್ದಲ್ಲಿ ಹೊರಳುತಿರ್ದಂ ಬೆಂಕಿಯೊಳ್ ಬಿದ್ದಿರ್ದ ಶಲಭದಂತೆ. ವಂಶಾನುಕ್ರಮದಿಂದೆ ಬಂದಿರ್ದ ಸಾಮ್ರಾಜ್ಯ ಸುಖಭೋಗ ಭಾಗ್ಯಂಗಳಂ ಕಳೆದು ತಾಂ ಪಡೆದಿರ್ದ ಬನ್ನಂಗಳೊಳ್ ಬಳಲಿ ಬೆಂಡಾದ ಭೂವಿಶ್ವರಂ, ತಾಳಲಾರದೆ ತನ್ನೊಡಲ ಭಾರಮಂ ತರಹರಿಸಿ, ತನ್ನರಸಿಯಂ ಕೈಬಿಟ್ಟು ಕಾಡಿನೊಳ್ ತಿರುಗುತಿರೆ ಕಾಳಾಹಿ ತಾಂ ಕಡಿದಿರಲ್ ಕರಾಳ ಗರಳದುರಿಯಂ ತಾಂ ತಾಳ್ವನೆಂತು? ಮುಂದವಂ ಬಾಳ್ವನೆಂತು? ಮನೆಯಿಲ್ಲ ಜನವಿಲ್ಲ ಬಾಂಧವರ ನೆರವಿಲ್ಲ ತನ್ನನೊಲಿದಿರ್ದ ಮಡದಿಯೇ ಬಳಿಯೊಳಿಲ್ಲ. ಮಾಂತ್ರಿಕರೆ ವೈದ್ಯರೆ? ಮತ್ತಾರು ಎಲ್ಲಿಹರು? ವಿಷದುರಿಗೆ ಬರಿನೆಲದ ಮೇಲಲ್ಲಿ ದಿಂಡುರುಳಿ ಬಿದ್ದಿರ್ದ ಭೂಪಾಲನಂ ಕಾವರಾರು? ನರನರಂಗಳಂ ಸೇದುತವಯವಂಗಳಂ ಮುದುಡಿಸುತೆ ಮತ್ತುದರಮಂ ಹಿಗ್ಗಿಸುತೆ ರುಧಿರಮಂ ಬತ್ತಿಸುತೆ ವೈವರ್ಣ್ಯದಿಂ ದೇಹಮಂ ಕುಗ್ಗಿಸುತೆ ಕ್ಷೀಣಿಸುತೆ ಮೇಣ್ ಚೈತನ್ಯಮಂ ಕುಂದಿಸುತೆ ಫಣಿವಿಷಂ ಪ್ರೋಜ್ವಲಿಸಿ ಸರ್ವಾಂಗಮಂ ವ್ಯಾಪಿಸಲ್ ಕೀನಾಶಪಾಶದೊಳ್ ಬಿಗಿವಡೆದ ತೆರದಿಂದೆ ಭೂವರಂ ನರಳುತ್ತೆ ದಮಯಂತಿಯಂ ಕರೆಕರೆಯುತಸ್ಪಷ್ಟವಾಣಿಯೊಳ್ ಮತ್ತೇನೇನೋ ಹಂಬಲಿಸಿ ನುಡಿಯುತೊರಲುತ್ತೆ ಮೂರ್ಛೆಯೊಳ್ ಬಿದ್ದಿರ್ದನು.

ಹಾಲಾಹಲವನೀಂಟಿರ್ದ ಕರಿಗೊರಳ ಶಿವನರಸಿಯಂ ಜಗದಂಬೆಯಂ ಗಿರಿಜಾತೆಯಂ ಮೆಚ್ಚಿಸುತೆ ದಮಯಂತಿ ತಾಂ ಪಡೆದಿರ್ದ ಮಾಂಗಲ್ಯವೊಂದಿರಲ್ ಮತ್ತದೆ ಭಾಗ್ಯತಾಂ ಸತಿತನದ ಸುವ್ರತದ ಸಾಣೆಯೊಳ್ ಮಿರುಗುತಿರೆ ನಿಷಧೇಂದ್ರನಸುವನಾ ಘೋರಾಹಿಗರಳಮೇಂ ಗೈದಪುದು?

ಮತ್ತಾಪಾತಿವ್ರತ್ಯದ ಶಕ್ತಿತಾಂ ತಡೆದಿರಲ್ ಮೃತ್ಯುವಂ ಕಣ್ತೆರೆದನಾ ವೈದರ್ಭಿಯುರಸಂ ಘಳಿಗೆಗಳು ನಾಲ್ಕಾರು ಕಳೆದಿರಲ್. ನೋಡಿದಂ ಬಳಿಯೊಳೇ ದಿವ್ಯಾಂಗಮಂ ತಳೆದೊರ್ವ ಪುರುಷ ತಾಂ ತನ್ನನುಪಚರಿಸುತ್ತೆ ನಿಂದಿರ್ದಪಂ. ಹೊಂಬಣ್ಣದಿಂ ಮಿರುಮಿರುಗುವ ದುಕೂಲಂ ಮೇಣ್ ಉತ್ತರೀಯಂ ಕೊರಳೊಳಳವಡಿಸಿರ್ದ ರತ್ನಹಾರಂ ಮಣಿಖಚಿತ ಕುಂಡಲ ಕಿರೀಟಂ ವಿಶಾಲವಕ್ಷಸ್ಥಲಂ ದೀರ್ಘದೇಹಂ, ಮಂದಹಾಸದೊಳೊಪ್ಪಿರ್ದ ಗಂಭೀರವದನಂ ಮತ್ತದೇ ಸೌಂದರ್ಯಕೊಪ್ಪಾಗಿ ಬಂದಿರ್ದ ತನುಕಾಂತಿಯುಂ ಕೂಡಿರ್ದ ಮಹಾಪುರುಷನಂ ಕಂಡೊಡನೆ ಕೌತುಕದಿ ದೃಷ್ಟಿಸುತೆ ಭೂವರಂ ವಿನಯದೊಳ್ "ನೀನಾರು ಪೇಳೆ"ನಲ್ ಮೆಲ್ನುಡಿಯ ಮುತ್ತುಗಳ ಸುರಿಸಿದಂ ತೇಜಸ್ವಿತಾಂ ತನ್ನಿರವನೊರೆವ ಕತದಿ "ಭೂಲಲಾಮನೆ ನಳನೆ ಮನ್ನಿಸೆನ್ನಂ. ಮಹಾರಾಜ ದಳ್ಳುರಿಯಾ ಮಧ್ಯದಿಂ ನೀನೆನ್ನ ಕರೆತಂದು ಮತ್ತೆನ್ನ ಬಂಧನವ ಹರಿಸಿರ್ದೊಡಂ ನಿನ್ನಂ ಕಚ್ಚಿ ವಿಷದುರಿಯ ಬಾಧೆಯೊಳ್ ಬೀಳಿಸಿದ ಘೋರಾಹಿ ಕಾರ್ಕೋಟಕಂ ನಾಂ. ಮುನಿಯುದಿರು, ನೃಪವರನೆ ಕೃತಘ್ನನಾನಲ್ಲ. ನಂಬುನೀಂ. ಗಂಧರ್ವನಾಂ ಗುರುಶಾಪದಿಂ ಮಹೋರಗಂ ತಾನಾಗಿ ಬಿದ್ದಿರ್ದೆ. ನಿನ್ನಿಂದೆಮೇಣ್ ನಿನ್ನಂಗಸ್ಪರ್ಶನದಿಂದೆ ಶಾಪವಿಮೋಚನಂ, ನೀಂ ಮೈಮುಟ್ಟಿ ಕರೆತರಲ್ ತೀರಿತೆನ್ನಯ ಪನ್ನಗತ್ವಂ. ಆದೊಡಂ ನಿನ್ನಂಕಚ್ಚಿದೆಂ. ಬೆಚ್ಚದಿರು. ತಪನಪುತ್ರಂ ಶನಿಯು ತಾಂ ಪಿಡಿದು ನಿನ್ನಂ ಪೀಡಿಸುತೆ ಸೌಭಾಗ್ಯಮಂ ಹರಿಸಿ ಪರಿಭವಕೆ ದೂಡುತ್ತೆ ಕಾಡುತಿರ್ಪನು ಛಲದಿ ಮುಂದೆರಡು ವತ್ಸರಗಳ ತನಕ. ಜಗದ ಜೀವರಸುಖಕೆ ಮೇಣ್ ಕಷ್ಟಕ್ಕೆ ಕರ್ಮತಾಂ ಕಾರಣಮದಾಗಿರ್ದೊಡಂ ಸೂಕ್ಷ್ಮದೊಳ್ ಗ್ರಹಚಾರ ಭಾವ ಪ್ರಭಾವ ತಾಂ ಬಿಡಲಾರದಡಿಗಡಿಗೆ ಫಲವನುಣ್ಣಿಸುತೆ ಮರ್ತ್ಯನಂ ಪಾರಲೌಕಿಕಬಂಧನದಿ ಪಿಡಿದಾಡಿಸುತೆ ನಡೆಯುತಿರ್ಪುದು ನಿಯಮದೊಳ್ ಸತತಮಾಗಿ. ಗ್ರಹಗತಿಯ ಮೀರಿ ನಡೆವಾತನಾರಿರ್ಪನೀಲೋಕದೊಳ್? ಬಿಡುನಿನ್ನ ಚಿಂತೆಯಂ. ಜನ್ಮದಿಂದ್ವಾದಶಾಷ್ಟಮ ಶನಿಯು ತಾಂ ಸರ್ವಾಧಿಪತ್ಯಮಂ ಕೈಕೊಂಡು ಮರ್ತ್ಯರಂ ಪೀಡಿಸುತೆ, ಭೂಮಿಯೊಳ್ ನರಕಮಂ ಕಾಣಿಸುತೆ ನಿನ್ನನುಭವದ ಪರಿಭವಂಗಳಂ ಹೊಂದಿಸುತೆ

ತನ್ನವಧಿಯೊಳ್ ಕಾಡುತಿರ್ಪಂ ದರಿದ್ರತೆಗೆ ದೂಡಿ ದೂಡಿ. ನರರ ನಾನಾ ತೆರದಿ ಬಾಧಿಪುದು ಮಾತ್ರಮೇಂ? ನರಲೋಕ ನಿರ್ಮಾಪಕರ ನಾ ಮೂರು ಮೂರ್ತಿಗಳ ಬಿಟ್ಟಿರ್ದ್ದನೇ ತಾಂ ಮಾರ್ತಾಂಡಪುತ್ರಂ? ನಾಲ್ ಮೊಗದ ಸೃಷ್ಟಿಕರ್ತಗೆ ಪೂಜೆಯುಂ ತಪ್ಪಿಸುತೆ, ಕಾಮನಯ್ಯಂಗೆ ಹದಿಬದೆಯ ಶಾಪಮಂ ಕೈವರ್ತಿಸುತೆ, ಭಿಕ್ಷಾಪಾತ್ರೆಯುಂ ತ್ರಿಪುರಾಂತಕನ ಕಯ್ಯೊಳೀಯುತ್ತೆ ಮೆರೆದಿರ್ದಯಮನ ತಮ್ಮಂಗೆ ನೀನ್ನರೇಂಗಣ್ಯಮೇ?

ಬೆದರದಿರುನೀಂ. ನಿನ್ನನಾಂ ಕಚ್ಚಿದುದಲ್ತು; ನಿನ್ನನೀದುಃಸ್ಥಿತಿಗೆ ತುತ್ತಾಗಿಸುತೆ ಕಾಡುತಿಹ ಶನಿಯನಾಂ ಕಚ್ಚಿದೆಂ. ವಿಷದುರಿಯ ದೆಸೆಯಿಂದೆ ನಿನ್ನ ರೂಪತಾಂ ಬೇರಾಯ್ತು. ಬಾಹುಕಂ ನೀಂ. ಇಂತೆಸಗದಿರೆ ನಾಂ ನಿನ್ನಂ ಗುರುತಿಸುತೆ ಭೀಗಳೆದು ದೂಡುತಿರ್ದುದು ಮಂದಿ. ಮೇಣ್ ಅವ ಮಾನಕೂಪದೊಳ್ ಬಿದ್ದು ಬಿದ್ದಳುತೆ ನೀಂ ತೊಳಲುತಿರ್ದೆ. ಬೇಸರಂ ಗೊಳ್ಳದಿರು. ನಿನಗುಪಕಾರಮಂ ನೆಮ್ಮುತಾಂ ಗೈದೆನಿಂತು. ಕೊಳ್ಳಿದೋ ದಿವ್ಯದುಕೂಲಂಗಳೆರಡಂ. ಮುಂದೆರಡು ವರ್ಷಗಳ ಕಾಲಮಂ ಕಳೆದು ನೀನಿವುಗಳಂ ಧರಿಸುತ್ತೆ ಹರನ ನೆನೆ. ಪಕ್ಷಿಗಳ್ ಕಚ್ಚಿಕೊಂಡ್ಯೊದಿರ್ದ ನಿನ್ನ ದೋತ್ರಮಂ ನೀಂ ಪಡೆವೆ. ಮತ್ತದರ ನೀನುಡಲ್ ನಿನ್ನಮೊದಲಿನ ಲೋಕಮೋಹಕ ರೂಪತಾಂ ಪ್ರಾಪ್ತಿಪುದು. ಕಾಡುತಿಹ ಬಾಧೆತಾಂ ಹರಿದು ನೀಂ ನಳನಪ್ಪೆ, ಮತ್ತಂತೆ ನೃಪನಪ್ಪೆ; ಶಿವನಾಣೆ ಸಟೆಯಲ್ಲ ನಂಬು ನಡೆ ನೀನು; ಶುಭಮುಂಟು; ಸತಿಪತಿಯರೊಂದಾಗಿ ಸುಖದಿಂದೆ ಬಾಳಿ. ನಿನ್ನ ಚಿತ್ತದೊಳಿರ್ದ ದೈವಭಕ್ತಿಯಕಿತ್ತು ನಿನ್ನನಾಳುವ ಶನಿಯುತಾಂ ನಿನ್ನನಲ್ಲದೆ ನಿನ್ನರಸಿಯುಂ ಪೀಡಿಸಿದ ತಪ್ಪಿತಕೆ ಕಾರ್ಕೋಟಕನ ವಿಷ ದುರಿಗೆ ಬೆಂದು ತಿತ್ತರಿಸುತಿರ್ಪಂ. ಆದೊಡಂ ನೀನೆಚ್ಚರದಿನಡೆ. ಶನೀಶ್ವರನ ಶಕ್ತಿಯುಂ ಮರೆಯದಿರು. ಶಿವನನೀಂ ನಂಬು. ಗಿರಿಜೇಶನಾ ಪಶುಪತಿಯು ಕಾವನನಿಶ" ಇನಿತೆಲ್ಲಮಂ ಪೇಳುತಾ ಬೃಂದಾರಕಂ ದೃಷ್ಟಿಗಗೋಚರಂ ತಾನಾಗಿ ತೆರಳಿರ್ದನತ್ತಲಿತ್ತಂ ಕೇಳಕೇಳುತೆ ನಳಂ ಮತ್ತೇನೇನೋ ನೆನೆನೆನೆದು ನಿಟ್ಟುಸಿರ ಸೂಸುತ್ತೆ ಸ್ವಪ್ನ ಸಾಮ್ರಾಜ್ಯದಿಂ ಮರಳಿ ಬಂದಿರ್ದ ತೆರದಿಂದೆ ಬೆಕ್ಕಸದಿ ತನ್ನ ಕೈಕಾಲು ಮೈಯೆಲ್ಲಮಂ ದಿಟ್ಟಿಸುತೆ ಮೇಣ್ ತಡವುತ್ತೆ ನೋಡಿದಂ ತನ್ನತಾಂ. ಗುರುತರಿಯದಂತೆ ಹೊಳೆಹೊಳೆವ

ಸ್ವರ್ಣವರ್ಣಂ ಮಾಸಿ ಮಸಿಯಂ ಮೆತ್ತಿರ್ದ ತೆರದಿಂದೆ ಮೈಯೆಲ್ಲ ಕಪ್ಪಾಗಿ
ಕಾಷ್ಠದಂತೊರಟಾಗಿ ಕೋಷ್ಠರೋಗದ ಕಲೆಗಳಿಂದಲ್ಲಲ್ಲಿ ಬಿಳುಪಾಗಿ
ಕರಡಿಯಂತೊತ್ತಿಬಳೆದಿರ್ದ ರೋಮಂಗಳಿಂ ಡೊಳ್ಳುಬೆಳೆದಿರ್ದುದರದಿಂ
ಗಿಡ್ಡ ಕೈಕಾಲ್ಗಳಿಂ ತನುವೆಲ್ಲ ಡೊಂಕಾಗಿ ದೊಡ್ಡಕಿವಿ ಕಿಸುಬಾಯಿ ಗಿಡ್ಡ
ಮೂಗುರುಟು ಕಂಣುಗಳ್ ಹತ್ತಿಸಿದ ಕೆನ್ನೆಗಳ್ ಮೇಲೆದ್ದು ಕವಲೊಡೆದ
ಹಲ್ಲುಗಳ್ ಮೋಣ್[illegible]ರದ ನೆತ್ತಿಯೊಳ್ ಹರಿದು ಹಬ್ಬಿರ್ದ ಗುಜ್ಜುಗೂದಲ
ಭಾರದಿಂ ಬಗ್ಗಿರ್ದ ಗೂನುಬೆನ್ನಿನ ಕುರೂಪತಾಂ ಭೂವರನ ದೇಹಮಂ
ಬಳಸಿ ಮೆರೆದಿರಲ್ ಕಾರ್ಕೋಟಕಂ ಮಹಿಮನಲ್ತೆ? ಮತ್ತವನ ವಿಷಮೋ
ನ್ನತೆಯನಾಂತಿರ್ದುದಲ್ತೆ? ಬಾಹುಜಕುಲೋತ್ತಂಸನಾ ಭೂಭುಜಂ
ಜನ್ಮದಿಂ ಭಾವಜನರೂಪದೈಸಿರಿಯ ಭಾಗ್ಯಮಂ ಪಡೆದಿರ್ದೊಡೇಂ
ಬುಧನಪಡೆದಿರ್ದಂದು ಗುರುಶಾಪದಿಂ ಚಂದ್ರತಾಂ ಕ್ಷೀಣತೆಯನಾಂತಿ
ರ್ದತೆರದಿಂದೆ ತಪನತೇಜದ ನೃಪಾಲಕಂ ಬಾಹುಕಂ ತಾನಾಗಿ ವಿಕರಾಳ
ರೂಪಕ್ಕೆ ತುತ್ತಾದನಾ ವಿಷದುರಿಯ ಬಾಧೆಯಿಂ. ಏನಿದದ್ಭುತಂ, ಭಯಾ
ವಹಂ ಬಾಹುಕನ ರೂಪಂ!

ಗಂಧರ್ವನೊರೆದಿರ್ದುದೆಲ್ಲಮಂ ಗ್ರಹಿಸುತ್ತೆ ಮತ್ತಾತನಿತ್ತಿರ್ದ
ವಸನಂಗಳಂ ಕಕ್ಷದೊಳ್ ತುರುಕುತ್ತೆ ನೃಪವರಂ ಬಾಹುಕಂ ಮುಂದಿರ್ಪ
ಸುಖವ ನಂಬುತ್ತೆ ಹಿಂದಿರ್ದುದಂ ನೆನೆನೆನೆದು ಬಂದಿರ್ದ ದುಃಖಮಂ
ತಡೆಯುತ್ತೆ ಕಾಮಾರಿಯಂ ನೆನೆದು ಮುಂದೆದ್ದು ಪಥವನರಸುತ್ತೆ ದಗ್ಧ
ಮಾಗಿರ್ದಡವಿಯೊಳ್ ನಡೆಯುತಿರ್ದಂ ತನ್ನರೂಪಕ್ಕೆ ತಾನೇ ಹೇಸಿ.
ವಿಂಧ್ಯಾಟವಿಯನಲೆದಲೆದು ನೃಪವರೇಣ್ಯಂ ಮಾರ್ಗಮಂ ಪಿಡಿದು
ಮತ್ತುತ್ತರಕೆ ನಡೆನಡೆದು ಕಳೆದಿರ್ದಂ ಎನಿತೆನಿತೋ ರಾತ್ರಿ ಹಗಲುಗಳ
ನಂತೆಯೆ ಗ್ರಾಮಾಂತರಂಗಳಂ ಪೊಕ್ಕು ಪೊರಟು.

ಕೊನೆಗೊಂದು ಪುಣ್ಯಮಯಮುಹೂರ್ತದೊಳ್ ಮಾರ್ತಾಂಡ
ನುಜ್ವಲಿಸಿ ಶಿರದ ಮೇಲೆತ್ತರದಿ ರಾಜಿಸುತೆ, ಬೆಂಗದಿರಬೇಗೆಯೊಳ್
ಧಾತ್ರಿಯಂ ದಹಿಸುತಿರೆ ಬೆಂದು ಬೆವರಿಳಿವ ಬಾಹುಕಂ ಬಂದು ಕಂಡಂ
ಮುಂದೆಸೆವ ಭಗೀರಥನ ಭಾಗ್ಯಮಂ, ಪರಿಯುತಿಹ ಜಾಹ್ನವಿಯನಾ ದೇವ
ನದಿಯಂ. ಎಡಬಲದ ತಡಿಗಳಂ ಕಿರುದೆರೆಯ ಕೈಯಿಂದೆ ಮೈದಡವಿ

ಬಾಗಿರ್ದ ತರುರಿಂಬೆಗಳ ಪೊದರುಗಳ ಮುತ್ತಿಟ್ಟು ಬೆಳ್ನೊರೆಯು ಮುತ್ತು ಗಳನಲ್ಲಲ್ಲಿ ಕಾಣಿಸುವ ಶಿಲಾಶಿಪನ ಮೇಲೆರಚುತ್ತೆ ಮಂದಾಕಿನಿಯು ತಾಂ ನಡೆಯುತಿರ್ದಳಃ ಮುಂದೆ ತವಕದಿಂ ಬಹುದೂರದೊಳ್ ತನಗಾಗಿ ಕಾದಿರ್ದ ಸಾಗರನ ಕಡೆಗೆ. ತನಗಾಶ್ರಯವನಿತ್ತು ಮಾರ್ಗವಂ ಕರು ಣಿಸಿದ ಭೂದೇವಿಯೊಡಲ ಕೊರಕಲಂ ಕಾಣಿಸದೆ ತನ್ನೊಡಲ ನೀರ ಹನಿ ಯಂ ದಟ್ಟೈಸುತಾ ತಾಣವಂ ತುಂಬಿಸುತೆ ಕಿಲಕಿಲ! ನಗುತಲಾ ದೇವಿ ತಾಂ ಪಾಪಿಗಳ ಪಾಪಮಂ ಕಳೆಕಳೆದು ಪರಿಯುತಿರ್ದಳು ಮುಂದೆ ಲೋಕಸೇವೆಯು ಹರಕೆ ಹೊತ್ತು.

ಕಂಡೊಡನೆ ಕೈ ಮುಗಿದು ಮುನ್ನಡೆದು ದಂಡೆಯಂ ಸೇರ್ದುದ್ದಂಡ ವಂದನೆಯುಗೈದಾ ಭೂವರಂ ವೃತ್ತಿಕೆಯು ಕೊಂಡದನೆ ಶಿವನ ಶಿರದಿಂದೆ ಗಂಗೆ ತಾಂ ತಂದು ತನಗಿತ್ತ ಪ್ರಸಾದಮೆಂದೇ ಭಾವಿಸುತೆ ಹಣೆಗೊತ್ತಿ ಕೊಂಡಾಡಿದಂ ಗಂಗಾಧರನನಾ ಚಂದ್ರಚೂಡನ ಶಿವನ ಭಕ್ತವತ್ಸಲನನಾ ಪಾಪಹರನ.

ಕ್ಷೇತ್ರ ಮಹಿಮೆಯೊಳಾ ಮಹೀಶ್ವರಂ ಮನದೊಳಗೆ ಧ್ಯಾನಿಸುತ ಲೀಶನಂ ನೆನೆಯುತಿರೆ ಬೆಂದು ನೊಂದಿರ್ದವನ ಮನಂ ಸಮತೆಗೇರುತೆ ನೆಮ್ಮದಿಯನಾಂತಿರ್ದುದೊಮ್ಮೆ. ಮತ್ತನಿತರೊಳ್ ಮೀಹಕ್ಕೆ ಮನ ಮಾಡಿ ಬಾಹುಕಂ ಪವಿತ್ರಜಲಪುಣ್ಯತೀರ್ಥದೊಳಿಳಿದು ಕೈಕಾಲ್ಗಳಂ ತೊಳೆದು ಮುಳುಗುತ್ತೆ ಮೇಲೆದ್ದು ಕಪ್ಪಾದ ಮೈಕೈಗಳಂ ಮಳಲಿಂದೆ ತಿಕ್ಕುತೊರಸುತ್ತೆ ನೋಡಿದಂ ಮುಂದಿರ್ದ ಬಣ್ಣ ತಾಂ ಬಂದಪುದೆ ಎಂದು? ಬಂದಪುದೆ ಎಂದೆಂದು ಹತಾಶೆಯಂಗೊಂಡಿರ್ದ ಭೂಮೀಶ್ವರಂ ಮೈತೊಳೆದು ಮುಳುಗಿ ಮಿಂದೆದ್ದು ನಿಂದಂ. ನಿಂದೊಡನೆ ವಿಸ್ಮೃತಿಯು ಕಂಡಮಂ ಬೆದಕಿ ಬೇರೊಂದು ಭಾವತಾಂ ಮೂಡುತಾತನ ಚಿತ್ತಮಂ ಕದಡಿಸಿತು; ಕಣ್ಣೀರ ತುಂಬಿಸಿತು. ಮೈಯ್ಯೆಲ್ಲ ನಡುಗಿದಂತಾಗಲಾ ಭೂ ಪಾಲಕಂ ನಿಂದಲ್ಲೆ ತಾಂ ಕುಸಿದು ಬಿದ್ದಂ. ನೆನೆದನೊಂದೊಂದೆ ಘಟ್ಟಮಂ: ಪಯೋಷ್ಣಿಯಂ, ತಾವಿರ್ವರುಂ ಮತ್ತಲ್ಲಿ ಮಿಂದಿರ್ದುದಂ ಮೇಣೊಂದೆ ಸೀರೆಯಂ ಸುತ್ತಿ ಮಾನವಂ ಮುಚ್ಚಿರ್ದುದಂ. ಮತ್ತುಮತ್ತ ದನೆ ಚಿಂತಿಸುತೆ ಮಡದಿಯಂ ಮುಂಡಾಡಿ ಮರುಗಿರ್ದುದಂ ಜತೆಯಾ

ಗುತೊಂದೆ ಬಟ್ಟೆಯನುಟ್ಟು ಬಂಧನದಿ ನಡೆದಿರ್ದುದಂ ಭಗ್ನ ಮಂದಿರ ದೊಳಲ್ಲಿ ಮಲಗಿರ್ದುದಂ ಮುಂದವಳನಲ್ಲಿ ಬಿಸುಟೆದ್ದು ನಡೆದಿರ್ದುದಂ ಮತ್ತೊಂದೊಂದನುಂ ಬಿಡದೆ ಬಿಡದಡಿಗಡಿಗೆ ನೆನೆದು ಚಿಂತಿಸುತೆ ಬಾಹುಕಂ "ಭಾರ್ಯೆಯಂ ಬಿಟ್ಟೆನಯ್ಯೋ! ಕೆಟ್ಟೆನೆ"ಂದೊರಲಿ ಮೂರ್ಛೆ ಯೊಳ್ ಬಿದ್ದಿರ್ದನು.

ಸುರನದಿಯ ತೋಯಮಂ ಸಿಂಪಡಿಸಿ ತಂಗಾಳಿ ತೀಡುತಿರೆ ಹೊತ್ತಿ ಳಿವ ವೇಳೆಯೊಳ್ ಪ್ರೈತಿಳಿದ ಭೂವರಂ ಮೇಲೆದ್ದು ನಿಲ್ಲುತನುತಾಪಮಂ ಬದಿಗೊತ್ತಿ ಸುಸ್ಥಳವನವಲೋಕಿಸುತೆ ನದಿಗಿಳಿದು ಸದ್ಧೈರ್ಯದಿಂದೀ ಸುತಾ ಗಂಗೆಯಂ ದಾಂಟಿ ಮತ್ತುತ್ತರದ ತಡಿಯಂ ಸೇರಿರ್ದನನಿತರೊಳ್ ದಿನಪ ತಾಂ ಪಡುಗಡಲ ಕೂಡಿರ್ದನು. ಮತ್ತಲ್ಲೆ ಕಾರಕತ್ತಲೆಯೊಳಾ ಬಾಹುಕಂ ಮಸಿಮುದ್ದೆಯೊಲ್ ಮರದಡಿಯೆ ಬಿದ್ದಲ್ಲಿ ನಿದ್ರಿಸದೆ ರಾತ್ರಿ ಯುಂ ಸವೆಸಿದಂ ವೈದರ್ಭೆಯನುಪಮ ಪ್ರೇಮಮಂ ನೆನೆನೆನೆದು ಕಣ್ಣೀರ ಮಿಡಿದು. ನಳನೃಪಂ ಮಿಡಿದಿರ್ದ ಕಣ್ಣೀರ ಧಾರೆಯೊಳೆ ಕರಗಿತಾ ಕಟ್ಟ ಳೆಯ ರಾತ್ರಿಯೆನೆ ದಮಯಂತಿಯಾ ಮಾಸತಿಯ ಫಾಲದೊಳ್ ಶೋಭಿ ಸುವ ತಿಲಕದೊಲ್ ಮೂಡುಕಡೆ ಬಾನಿನೊಳ್ ಭಾನುತಾಂ ಮೂಡಿದಂ, ಗಂಧರ್ವನಾದೇಶತಾಂ ಮತ್ತೊರ್ಮೆ ಬಾಹುಕನ ಬಗೆಯೊಳಗೆ ಮೂ ಡಿರ್ದ ತೆರದಿ. ಗಗನಜ್ಯೋತಿಯ ಕಿರಣ ತಾಂ ಮುಂಬಿಸಿಲ ಸೂಸುತವನಿಯಂ ಬೆಳಗಿಸಲ್ ಮುಂದಿನಾಶೆಯ ಜ್ಯೋತಿ ತಾಂ ನೃಪ ವರೇಣ್ಯನ ಶೋಕತಮಚಿತ್ತಮಂ ಬೆಳಗಿರ್ದುದು. ಮತ್ತೊಮ್ಮೆ ಜಾಹ್ನ ವಿಯ ಸ್ನಾನಮಂ ಗೈಯ್ಯುತಾಹ್ನಿಕಮಂ ತೀರಿಸುತೆ ಬಾಹುಕಂ ಪುಣ್ಯೋ ದಕವನುದರದೊಳ್ ತುಂಬಿಸುತೆ ಪಯಣಮುಖನಾಗುತುತ್ತರೋತ್ತರಕೆ ಮುಂದಡಿಯನಿಟ್ಟು ತಾಂ ಮಂದಾಕಿನಿಯನಾ ದಿವ್ಯವಾಹಿನಿಯ ಪಿಂದಿಕ್ಕಿ ನಡೆದವಂ ಮುಂದುಮುಂದಕೆ ನಡೆದನು. ಹೂಬಿಸಿಲು ಮುಂಬಿಸಿಲು ಹೊಂಬಿಸಿಲು ತಾಂ ಪರ್ಯಾಯದಿಂ ಪ್ರಖರತೆಯನಾಂತಿರಲ್ ಕ್ರಮಿಸು ತಿರ್ದ ಭೂವರಂ ಹಳ್ಳಿಗಳನೊಳಪೊಕ್ಕು ಮತ್ತಲ್ಲಲ್ಲಿ ಮನೆಮನೆಯ ಸೌಕರ್ಯಸಾಧನಂಗಳ ನೋಡುತಲೆ ಮುಡಿಪಾಗಿ ಕಡಿದಿರ್ದ ಮಾರ್ಗಮಂ ಕಾಣುತಾ ಪಥದಿ ಮುಂದೊತ್ತಿ ಸಾಗುತಿರೆ ಕಣ್ಮನಂಗಳ ಸೆಳೆಯುತಾ

4

ನಂದವಂ ಬೀರುತಿಹ ಗ್ರಾಮಾಂತರದ ಸಂಸ್ಕೃತಿಯನೀಕ್ಷಿಸುತೆ ಆ ನಾಡಿನರಸನಂ ಮಾನಸದಿ ಕೊಂಡಾಡಿ ತಲೆದೂಗಿ ನಡೆಯುತಿರ್ದಂ ಬಿಸಿಲ ಬೇಗೆಯಂ ಲೆಕ್ಕಿಸದೆ ನೈಷಧವ ನೆನೆದುನೆನೆದು.

ಇಕ್ಕೆಲದೊಳತಿ ವಿಸ್ತಾರದೊಳ್ ವ್ಯಾಪಿಸಿದ ಹೊಲಗಳೊಳ್ ಬೆಳೆ ಬೆಳೆದು ಬಾಗಿರ್ದ ಕಳವೆಗಳ ಕ್ಕೊಯ್ಕೊಯ್ದು ತೆನೆಗಳಂ ಬಡಿಬಡಿದು ರಾಶಿ ರಾಶಿಯಾಗೊಟ್ಟುತ್ತೆ ಕೂಡಿಸಿದ ಧಾನ್ಯವಂ ಮತ್ತದ್ಥೆ ವಿಧವಿಧದ ಕೃತ್ಯಂ ಗಳೊಳ್ ಬಿಡುವಿಲ್ಲದೊಂದೇಕ್ರಮದಿ ದುಡಿಯುತಿರ್ದಾ ಹಳ್ಳಿಗರನಂ ತೆಯೆ ಕವಣೆ ಕಲ್ಲಂ ಪಿಡಿದು ಬೊಬ್ಬಿರಿದು ವ್ರೀಹಿಯಂ ಭಕ್ಷಿಸುವ ಪಕ್ಷಿ ಗಳನೋಡಿಸುವ ಬಾಲರಂ ಮತ್ತಾ ಬಳಿಯ ಜನಜಂಗುಳಿಯ ಸಂತಸದ ಸುಗ್ಗಿಯಂ ಕಾಣುತ್ತೆ ಮೇಣವರ ಆನಂದದಾಟೋಪವಂ ಕೇಳುತ್ತೆ ಮುಂನಡೆದು ಹಿಂಡುಹಿಂಡಿನ ದನಗಳಂ ಕರುಗಳಂ ಮೇಣವುಗಳಂ ಮೇಯಿಸುವ ಗೋಪಾಲರಂ ಬಾಲರಂ ಕಂಡನಾ ಭೂಪಾಲನು. ಗೋ ವುಗಲ್ ಬಂದು ನೀರ್ ಕುಡಿಯಲೆಂದಲ್ಲಿ ತೋಡಿಸಿದ ಕೆರೆಗಳಂ ಪಥಿಕ ರಾಯಾಸವಂ ಕಳೆದವರ ತೃಷ್ಣೆಯಂ ಪರಿಹರಿಸಲೆಂದಲ್ಲಲ್ಲಿ ಕಟ್ಟಿಸಿದ ಸಾಲ್ ಮರದ ಕಟ್ಟೆಗಳ ಮೇಣ್ ಕೊಳಗಳರವಟ್ಟಿಗೆಯನೆಲ್ಲವಂ ನಿಲ್ಲು ತೀಕ್ಷಿಸುತೆ ಬಾಹುಕಂ ತೃಷೆಯನಾರಿಸುತೆ ಬಂದದೇ ಶೃಂಗಬೇರದ ಹಳ್ಳಿ ಯೂರಂ ಸೇರ್ದನು.

ವಿಸ್ತಾರವಾದಂಗಳಂಗಳನಿಟ್ಟು ಗೋಧಾನ್ಯ ಶಾಲೆಗಳ ಮೇಣ್ ಪರಿವಾರ ಗೃಹಗಳಂ ಕೂಡುತ್ತೆ ಸ್ವಚ್ಛತೆಯ ಸಾರಣೆಯನಾಂತಿರ್ದ ಹಳ್ಳಿ ಗರ ನೂರಾರು ಭವನಂಗಳಿರ್ದುವಲ್ಲಿ ಮಾರ್ಗದಿಕ್ಕೆಲದಿ ಸಾಲುಸಾಲಾಗಿ ರಂಜಿಸುತೆ. ಮೈಮುರಿದು ದುಡಿದು ಮೃಷ್ಟಾನ್ನವಂ ಭುಂಜಿಸುತೆ ಪಟ್ಟ ಣಕ್ಕೆ ಮತ್ತನ್ನಮುನ್ನಿತ್ತು ಹಿರಿಮೆಯಂ ಪಡೆದಿರ್ದ ಹಳ್ಳಿಯೊಳ್ ಬೇಕಾದ ಸಂಪದವನೆಲ್ಲವಂ ಕೈಗೊಳಿಪ ಹಳ್ಳಿಗರನಂತೆಯೇ ಕೂರ್ಮೆಯಿಂ ಪಾಲಿಪಾ ನಾಡಿನರಸಂ ಕಾಪಿಡಲು ಕಿರುಪಡೆಯನಲ್ಲಿಟ್ಟು ನ್ಯಾಯಾಧಿ ಕಾರಿಯಂ ನೇಮಿಸುತೆ ಸುವ್ಯವಸ್ಥೆಯಂಗೈದಿರ್ದನೆನಲ್ ಕಂಡನಾ ನೃಪವರೇಣ್ಯಂ ನ್ಯಾಯಶಾಲೆಯನಂತೆಯೇ ರಕ್ಷಣೆಯ ಠಾಣ್ಯವಂ. ಮತ್ತಲ್ಲಿನಾ ಜನಮನದ ನೃಪಾನುರಾಗವಂ ಮೇಣ್ ಭಕ್ತಿಯಂ,

ತುಂಬಿರ್ದ ಧರ್ಮಶಾಲೆಯಂ ನೋಡುತಾ ಭೂವರಂ ಮುನ್ನಡೆಯುತಿರೆ
ಕಂಡಿತಾ ಕಿಕ್ಕಿರಿದ ಅನ್ನಸತ್ರಂ ಮೇಣ್ ಅನಾಥನಿಲಯಂ. ನಡೆನಡೆ
ಯುತಾ ಊರತುದಿಯಂ ಸೇರುತಿರೆ ನೃಪಾಲಕಂ ಕಂಡನಲ್ಲಿಯೆ ದೀರ್ಘ
ವಿಸ್ತೃತವಾಗಿ ಕಟ್ಟಿರ್ದ ಸೋಪಾನಪಂಕ್ತಿಯಂ, ತಂಪಾದ ತಿಳಿನೀರ
ತುಂಬಿರ್ದ ಸಲಿಲದರ್ಪಣತಟಾಕವಂ ಮತ್ತಲ್ಲೆ ಹುಲುಸಾಗಿ ಬೆಳೆ
ದಿರ್ದ ಹೂದೋಟವಂ ವಿಶಾಲದಶ್ವತ್ಥವಂ ಮೇಣದರ ಕಟ್ಟೆಯಂ.
ನಡೆದು ಬರೆ ನೋಡಿರ್ದುದೆಲ್ಲವಂ ಮನಃಫಲಕದಲಿ ಚಿತ್ರಿಸುತೆ ಮತ್ತೊ
ಮ್ಮೆ ನೋಡಿದಂ. ನೋಡನೋಡುತೆ ತನ್ಮಯಂ ತಾನಾಗಿ ಕೆರೆಯ ದಂಡೆ
ಯ ಮೇಲೆ ಭೂಲಲಾಮಂ ಕುಳ್ಳಿರ್ದನು. ಮೇವುಂಡ ಗೋವುಗಳ್
ಮಲಗಿ ಮತ್ತದನೆ ಮೆಲುಕಾಡಿದೊಲ್ ನಳನೃಪಂ ಮತ್ತುಮತ್ತದನೆ, ತಾಂ
ಕಂಡುದನೆ, ಮನದೊಳಗೆ ಕಾಣುತ್ತೆ ತನುಮನಂಗಳು ಬಳಲೆ ಕುಳಿ
ತಿರ್ದವಂ ಜೊಂಪಿಡಿದು ತೂಕಡಿಸೆ ಕಾಲ್ ಚಾಚಿ ಮತ್ತಲ್ಲೆ ಮಲಗಿ
ರ್ದನು. ಶಾಖೋಪಶಾಖೆಗಳ ಬೆಳಸುತ್ತೆ ಬೆಳೆದಿರ್ದ ಅಶ್ವತ್ಥ ತಾಂ ತನ್ನ
ಸಾನ್ನಿಧ್ಯದೊಳ್ ಮಲಗಿರ್ದ ಭೂವರಗೆ ನೆಳಲಿತ್ತು ತಪನ ತಾಪವಂ ತಗ್ಗಿ
ಸಿರೆ ಸರಸಿಯೊಳ್ ಮಿಂದೆದ್ದು ಮಂದಾನಿಲಂ ಪುಷ್ಪವಾಟಿಯ ಸೇರಿ
ಸೌರಭವಸಾಗಿಸುತೆ ನೃಪವರೇಣ್ಯನಂ ವೈದಡವುತುಪಚಾರವಂ ಗೈಯು
ತಿರೆ ಮಲಗಿರ್ದ ವೈದರ್ಭೆಯರಸತಾಂ ಸ್ವಪ್ನಸ್ಥನಾಗಿರ್ದನು.

ಕಂಡನೊಂದೊಂದೆ ಕನಸಿನೊಳ್ ತನ್ನಾಸೆಯಾಕಾಂಕ್ಷೆಗಳ್ ಗರಿ
ಗೊಂಡು ವೈರೂಪ್ಯದೊಳ್ ಕಣ್ಣಮುಂದಿರ್ದು ಕುಣಿದಂತೆ. ಮತ್ತವುಗಳಂ
ಪೊರ್ದಿ ತಾಂ ಭೋಗಿಸುತ್ತಾನಂದದೊಳ್ ಸ್ವಪ್ನಸುಖ ಸ್ವರ್ಗವಂ ಪಡೆ
ದಿರ್ದನಿತರೊಳ್ ಸ್ವರ್ಗ ತಾಂ ಸಿಡಿದೊಡೆಯೆ ಪಾತಾಳದೊಳ್ ಬಿದ್ದು
ತಾಂ ಹಾವುಹಲ್ಲಿಗಳಿರುವೆಗಳ್ ಮೇಣ್ ಚೇಳುಗಳ್ ತುಂಬಿರ್ದ ಕತ್ತಲೆ
ಯ ಗವಿಯೊಂದರೊಳ್ ನರಕಮಯಯಾತನೆಯನಾಂತಿರಲ್ ವಿಕೃತ
ವೇಷದಿಂದದ್ಭುತಾಕಾರ ತಾನೊಂದು ಕ್ರೂರದಂಷ್ಟ್ರವ ಮಸೆದು ಮುಂದೈದಿ
ತನ್ನಂ ತಿನ್ನಲೆಂದಾತುರದಿ ಬರುತಿರಲ್ ಶತಚ್ಛಿದ್ರ ಜೀರ್ಣಾಂಬರದ
ಬಿಚ್ಚಿರ್ದ ಕೇಶಪಾಶದ ತೇಜಸ್ವಿ ತರುಣಿಯೊರ್ವಳ್ ಬಂದು ತನ್ನ
ನೆತ್ತುತಂಬರಕೆ ಹಾರುತ್ತೆ ಮುಗಿಲಮೂಲೆಯ ಸೇರಿ ಭೂಮಿಗಿಳಿದೈತಂದು

ಮದುವೆಮನೆಯನು ಹುಗಿಸಿ ಮತ್ತೊಂದು ಶಿವಾಲಯಕ್ಕೈದಿ ಚಂದ್ರ ಚೂಡನ ಮೂರ್ತಿಯಂ ಕಾಣಿಸುತೆ ಭಕ್ತಿಯಿಂದರ್ಚಿಸುತೆ ಪೂಜಿಸಿದ ಪುಷ್ಪವಂ ಪ್ರಸಾದವೆಂದೆತ್ತಿ ಮುಡಿಸುತ್ತೆ ಕಾಲ್ವಿಡಿದು ಮತ್ತೆರಡು ಬಾಲರಂ ಪಾದದೊಳ್ ಕೆಡವುತ್ತೆ ನಿಡುಸುಯ್ದು ದೂರದೊಳ್ ನಿಂದು ಕಣ್ಣೀರ ಸುರಿಸುತ್ತೆ ದೀನಾನನವ ತನ್ನೆರಡು ಕೈಯಿಂ ಮುಚ್ಚುತ್ತೆ ಬಿಕ್ಕಿ ಬಿರಿದಳಲುತ್ತೆ ನಿಂದಿರ್ದಳು. ಸಂತೈಸಲೇಳುತಿರೆ ಶಕ್ತಿಯಿಲ್ಲದೆ ಬಿದ್ದು ಮತ್ತವಳ ದುಃಖಮಂ ಕಾಣಲಾರದೆ ಬಿದ್ದು ಬಿದ್ದಿಡಿಗಡಿಗೆ ತರಹರಿಸಿ ಭಯದಿಂದೆ ಭೂಪಾಲಕನು ಕಣ್ತೆರೆದನು.

ನೋಳ್ಪನೇನಂ ನಳಂ? ಮತ್ತಾರ ತಾಂ ಕಂಡಪಂ? ಬರಿಯ ಮಾಯೆಯ ಭ್ರಾಂತಿಯೋಂ? ಅಲ್ತಲ್ತು; ಸ್ವಪ್ನಂ. ಸುಪ್ತಮಾಗಿರ್ದನಿತೆನಿತೊ ಭಾವಗಳ್ ಕನಸಿನೊಳ್ ಬೆಳೆಬೆಳೆದು ಭೇತಾಳನೊಲ್ ಪಿತ್ತಮಂ ಕದಡುತ್ತೆ ಸುಖದುಃಖಭಯಭ್ರಾಂತಿಯೆಲ್ಲಮಂ ಕೈಗೊಳಿಸಿ ಜಾಲಮಂ ಹೆಣೆಯುತ್ತೆ ಮನವಪಿಡಿದಾಡಿಪುದೆ ಸ್ವಪ್ನಮೆನೆ ನಳನೃಪಂ ತನ್ನಿರವನೇ ಕನಸಿನೊಳ್ ಕಂಡಿರ್ದನು. ಮತ್ತನಿತರೊಳ್ ಜಾಗ್ರತಕೆ ಜಾರಿರ್ದ ಭೂವರಂ ಶಂಕಿಸುತೆ ಕನಸಿನೊಳವಂ ಚಿಂತಿಸಲ್ ಸ್ವಪ್ನ ತಾಂ ತನ್ನುರವನಿರಿದಿರಿದು ಕುದುರಿಸುತೆ ವಿರಹಮಂ ಬೆದಕುತಿರೆ ದುಃಖಮಂ ತನ್ನರಸಿಯಂ ಸಾಧ್ವಿಯಂ ನೆನೆನೆನೆದು ಮರುಗಿದ್ದ ಹತಭಾಗ್ಯ ತಾನಾದೆನೆಂದು.

ಅನ್ನೆಗಂ ಶೃಂಗಬೇರದ ಬಾಲಕರ್ ಬಂದಿಳಿದು ಸರಸಿಯೊಳ್ ಕೆಳೆಯರಂ ಕೂಡುತ್ತೆ ಸಮ್ಮೋದದೊಳ್ ನೀರಾಟಮಂ ತೊಡಗಿರಲ್ ಕಾಣುತೀ ಬಾಹುಕನ ರೂಪಮಂ ಕೈತಟ್ಟಿ ಕುಣಿದಾಡಿ ನೀರಂ ಬಡಿಬಡಿದು ಹಾರಿಸುತೆ ಮತ್ತವನ ಮೆಯ್ಯಂ ತೋಯಿಸಲ್ ತೊಡಗಿರ್ದ ಚೇಷ್ಟೆಯಂ ಕಾಣುತಾ ನೃಪಾಲಕಂ ಗಂಧರ್ವನೊಲಿದಿತ್ತ ವಸನದಿಂ ತೊಯ್ದಿರ್ದ ಮೆಯ್ಯನಂತೆಯೇ ಕಣ್ಣುಗಳನೊರಸುತ್ತೆ ಮತ್ತವನ ವಾಣಿಯಂ ನಂಬುತ್ತೆ ಧೈರ್ಯಮಂ ತಳೆಯುತ್ತೆ ಏಳುತಲ್ಲಿಂ ಮುಂದೆ ಕಾದಿರ್ದ ಪಥವ ಕೈಗೊಂಡು ನಡೆಯುತಿರ್ದಂ ನೂರಾರರೆಣಿಕೆಯೊಳ್ ಮುಂದಿ ಆ ಮಾರ್ಗಮಂ ಪಿಡಿದು ಅತ್ತಿತ್ತ ಸಾಗುತಿರಲು.

ಬಗೆಬಗೆಯ ಸಾಮಗ್ರಿಯಂ ಪೊತ್ತು ಬರುತಿರ್ದವರ ಮೇಣ್ ತರತರದ ಮೂಟೆಗಳ ತಲೆಯ ಮೇಲೆಯೆ ಹೊತ್ತು ಹೋಗುತಿರ್ದವರ ನೆಲ್ಲರಂ ನೋಡುತ್ತೆ ನೃಪಾಲಕಂ ತಾನೊಂಟಿಯಾಗುತೆ ಬೇರೊಂದು ಪಾರ್ಶ್ವದೊಳ್ ನಡೆಯುತಿರ್ದಂ ಮುಂದೆ, ಕಳೆದಿರ್ದ ಘಳಿಗೆಗಳ ಹೊತ್ತು ತಾಂ ಹೊತ್ತು ಸಾಗುವ ತೆರದಿ ಪಡುಗಡೆಯ ಬಾನು ತಾಂ, ಹೊತ್ತು ತಿರ್ದಂತೆ ಕೆಂಪಾಗೆ ಹೊತ್ತುತುರಿಯುವ ಭಾನು ತಾನಭ್ರದೊಳ್ ಕೆಳ ಗಿಳಿಯುತಿರಲು.

ಹತ್ತಿಯಂ ಹಸಿದಿಕ್ಕಿದೊಲ್ ಬೆಳ್ಳನೆಯ ತೆಳುಮೋಡಂಗಳಾಗಸದಿ ಸಂಜೆಯೋಕುಳಿಯ ಬೆಳ್ನೊರೆಯ ಮುತ್ತುಗಳ ಸೇಸೆಯಂತಲ್ಲಲ್ಲಿ ಗಾಳಿಯಿಂ ಹಾರುತ್ತೆ ತೇಲುತಿರೆ ಮತ್ತವುಗಳಂ ಕೈಗೊಂಡ ಸಪ್ತಾಶ್ವತಾಂ ಸೀಲಿಮೆಯಪತ್ತಲದಿ ರಂಜಿಸುವ ದಿಗ್ವನಿತೆಯಂ ಕುಂಕುಮಾಕ್ಷತೆಯ ನೆರಚುತ್ತೆ ಬೋಳೈಸಳೆಂದಿಳಿದಿಳಿದು ಬರುತಿರ್ದನಂಬರದೊಳು.

ನಿತ್ಯನಿಯಮದೊಳೊಂದೆ ಕ್ರಮದಿಂದೆ ಲೋಕವಂ ಕಾಣುತಿಹ ಕರ್ಮಸಾಕ್ಷಿಯ ಕುಲಜರಾಕ್ಷಾತ್ರಕರ್ಮಕೆ ಸಾಕ್ಷಿಯೆನೆ ರಾಜದಂಡವ ಪಿಡಿದು ದೀಪ್ತಿ ರಾಜನತೆರದಿ ರಾಜಿಸಿರೆ ರಾಜರಾಜರ ಪಟ್ಟವಂ ಪಡೆದಿರ್ದ ಧರ್ಮರಾಜ್ಯದ ದೊರೆಯ ಹಿರಿಮೆಯಂ ಮೇಣ್ ಮುಂದಿರ್ದ ನಗರ ದೊಳ್ ನೆಲೆಗೊಂಡ ಸುಖಸಿರಿಯ ಸೌಭಾಗ್ಯದಾನಂದದೌನ್ನತ್ಯಮಂ ಲೋಕದಾ ಕಣ್ಣಿಂಗೆ ಕಾಣಿಸುವ ತವಕದೊಳ್ ಹಿಗ್ಗುತುಬ್ಬಿರ್ದ ಭೂರಮೆಯ ವಕ್ಷೋಜಾತಮೆನೆ ಮಾರ್ಗದಿಕ್ಕೆಲದಿ ಬೆಳೆದು ಬಂದಿ ರ್ದೆರಡು ಬೆಟ್ಟಗಳ್ ಬೈಗುಗೆಂಪಿನ ಮುಂದೆ ಚೆಂಬೊನ್ನಿನೊಲ್ ಮಿರು ಗುತ್ತೆ ಹೊಳೆಯುತಿರ್ದುವು ಪಳಪಳನೆ. ಹಾಲ್ಗಲ್ಲಿನಾ ಹೊರೆಯ ಹೊತ್ತು ಬಜ್ಜರದ ಕಿಡಿಗಳಂ ಚೆಲ್ಲಿದಂತಲ್ಲಲ್ಲಿ ಭೂತಲದೊಳಭ್ರಕಂ ಮಿನುಗುತಿರೆ ಪಾಷಾಣ ಪಂಕ್ತಿಗಳ್ ಪ್ರವಾಳ ಮಾಣಿಕ್ಯ ಮೌಕ್ತಿಕಂಗಳ ತೆರದಿ ಹೊಳೆ ಹೊಳೆಯೆ ಮಹಾರಾಜನರಮನೆಯ ತುಂಗಶೃಂಗಂಗಳಂ ಪೋಲುತಾ ಕಾಕುಸ್ಥಕುಲದೀಪಕರ ಕೋಸಲದ ಹೆದ್ದಾರಿಯಂ ನಿರ್ದೇಶಿಸಲ್ ಶೃಂಗಾರದಿಂದಣಿಯಾದ ನಂದಿಕೇಶ್ವರನ ಶೃಂಗದ್ವಂದ್ವಮೆನೆ ಶೃಂಗ ಬೇರದ ಶೈಲಶೃಂಗಂಗಳ್ ಕಂಗೊಳಿಸಿ ನಿಂದಿರ್ದುವು. ಮೊಣಕೈಯನೂರಿ

ಮತ್ತೊತ್ತಿರ್ದ ಹಸ್ತದೊಳ್ ಶಿರದಭಾರವನಿಕ್ಕಿ ಮೊಗಮೊಗನ ನೋಡುತ್ತೆ ಕಾಲ್ನೀಡುತೆಡಬಲದಿ ಮಾರ್ಗಮಂ ಕಾಪಿಡಲು ಮಲಗಿರ್ದ ಪಹರಿಗಳ ತೆರದಿಂದೆ ಬೆಳೆದಿರ್ದ ಬೆಟ್ಟಗಳ್ ನೀಡಿರ್ದುವಲ್ಲಿ ಗರ್ಭಗುಡಿಯಾನೆಕಲ್ಲಂ ಪೋಲ್ದು.

ನಿಸರ್ಗಸ್ವರ್ಗಸೋಪಾನದೊಳ್ ನಿಷಧೇಂದ್ರನೆಲ್ಲಮಂ ನೋಡ ನೋಡುತ್ತೆ ಕ್ರಮಿಸುತಿರಲನ್ನೆಗಂ ಜನರಹಿತಮಾಗಿದ್ದ ಮಾರ್ಗದೊಳ್ ಜನಪ ತಾನೊಂಟಿಯಾಗುತಲಿರಲು ದಿನಪ ತಾನೆತ್ತಣ ದಿನ್ನೆಯಿಂದಾಚೆ ಯೊಳ್ ಮರೆಗೊಂಡು ಕಾಣದಾದಂ ಮುಂದಿನುದಯಕ್ಕೆ ಸಿದ್ಧನಾಗಿ. ಮಬ್ಬಿನೊಳ್ ನಡೆನಡೆದು ಮತ್ತದೇ ಪಥವನನುಸರಿಸಿ ಮೇಲೆತ್ತರವ ಸೇರುತ್ತೆ ಕತ್ತಲೆಯೊಳೇನನುಂ ಕಾಣದಾ ಚಂದ್ರಕುಲಸಂಭವಂ ನಡೆಯು ಲಾರದೆ ಮುಂದೆ ಬಳಿಯೊಳಿಹ ಸಾಲ್ಮರದ ಕಟ್ಟೆಯೊಂದಂ ಕಂಡು ಮೇಲೇರಿ ಮಂಡಿಸಿದನಾ ರಾತ್ರಿಯಂ ದೂಡುತ್ತೆ ಕಳೆಯಲೆಂದು.

ನಿರ್ಜನತೆ ನೀರವತೆಯಾ ತಾಣಮಂ ಗಂಭೀರತೆಯೊಳದ್ದಿರಲ್ ಶಿಲಾವಿಗ್ರಹದ ತೆರದಿಂದೆ ಬಿಗಿದ ಮೌನದೊಳಿರ್ದನಾ ಭೂವರಂ ಕಾಳ ರಾತ್ರಿಯ ಮುಖದ ಕರಿಮುಚ್ಚೆಯೊಲ್ ಮರದಡಿಯ ಕಟ್ಟೆಯಾ ಪೀಠ ದಲ್ಲಿ. ಉದಯಾಸ್ತಪಥವ ಪಿಡಿದೈದಿ ಬಳಲಿರ್ದ ಭಾಸ್ಕರಂ ಪಶ್ಚಿಮಾಬ್ಧಿ ಯೊಳಿಳಿದು ಮುಳುಗುತ್ತ ತಂಪಾದ ಸುದ್ದಿಯಂ ಜಗಕೆಲ್ಲ ಸಾರ್ವತೆರದಿಂದೆ ತಂಗಾಳಿ ತಾಂ ಬೀಸುತೊಯ್ಯನೊಯ್ಯನೆ ಬಂದು ತನುಮನದಿ ನೊಂದು ಬೆಂದಿರ್ದವನಿಪಾಲನ ಮನಕೆ ಸುಖಸ್ಪರ್ಶಮಂ ನೀಡುತ್ತೆ ಶಾಂತಿಯಂ ಕೋರಿರ್ದುದೆನೆ ನಿಟ್ಟುಸಿರ ಬಿಸಿಯ ಗಾಳಿಯಂ ಬಿಟ್ಟತ್ತ ತಂಬೆಲರ ಸೇವೆಯೊಳ್ ನೆಮ್ಮದಿಯನಾಂತಿರ್ದನಾ ಭೂವರೇಣ್ಯಂ ಕಣ್ದಿಟ್ಟಿಯನಟ್ಟಿ ಸಾಕೇತಮಂ ನಿರುಕಿಸುತ್ತೆ.

ಧಾತ್ರಿಯಂ ಕತ್ತಲೆಯ ಕೈಗಿತ್ತು ವಾತ್ಸಲ್ಯದಿಂ ಸೂಕ್ಷ್ಮತೆಯ ಸಹಸ್ರಾರು ರೂಪಂಗಳಂ ತಳೆಯುತಾ ರವಿಯು ತಾಂ ತನ್ನವರ ರಾಜ್ಯ ದಳ್ಕರೆಯ ನಗರದೊಳ್ ರಾತ್ರಿಯೇ ಮೂಡಿರ್ದನೆನೆ ಖದ್ಯೋತಕುಲ ಕೋಟಿಯುಲ್ಲಲ್ಲಿ ಸಾಲ್ಗೊಂಡು ಮಿನುಗುತಿರ್ದಂತೆ ಮತ್ತೆನಿತೆನಿತೋ ದೀಪ ರಾಜಿಗಳ್ ಮನುಕುಲದ ಕೀರ್ತಿಯಂ ಪ್ರೋಜ್ವಲಿಸಿ ದುರ್ಭೇದ್ಯಮಾದ

ಯೋಧ್ಯೆಯುಂ ಬೆಳಗಿರಲ್ ಯೋಜನಾಂತರ ದೂರದಾ ಪತ್ತನಂ ನಕ್ಷತ್ರ ಮಣಿ ಮಾಣಿಕ್ಯಮಾಲೆಯಿಂ ಮುಚ್ಚಿರ್ದ ಹಂದರವ ಹೋಲುತಿರ್ದುದು. ಹೊಳೆಹೊಳೆವ ಕಣ್ ಕದಪುಗಳ ಮೇಣ್ ಲಾವಣ್ಯ ತೇಜಮುಂ ತಳೆದಿರ್ದ ಭೂರಮೆಯ ವದನಮೆನೆ ಮಣಿಖಚಿತ ಕೋಟೀರ ಕುಂಡಲಂಗಳ ಝಳಕೆ ಝಗಝಗಿಸಿ ತಾನುಜ್ವಲ ಪ್ರಭೆಯಿಂದೆ ಜ್ಯೋತಿರ್ಮಂಡಲವ ಪೋಲ್ದಾ ಸಾಕೇತಪುರವರಂ ಬೆಳಗಿತಾ ರಾತ್ರಿಯೊಳ್ ಮಾರ್ತಾಂಡ ಕುಲದೀಪಕರ ಕೀರ್ತಿಯಾ ದೀಪ್ತಿಯಿಂದೆ. ಭೂಸುರರ್ ಕೂಡುತ್ತೆ ಯಜ್ಞಮುಖದಿಂ ದರ್ಪಿಸಿದ ಹವಿಯುನಾ ದೇವರ್ಕಳಿಂಗೊಪ್ಪಿಸುವ ಹವ್ಯವಾಹಂ ಕೋಸಲ ಮಹಾ ನಗರದೊಳ್ ಕೂಡಿಟ್ಟ ದೀಪಗಳ ಕುಡಿಯೇರಿ ಏಕತೆಯ ಮತ್ತ ನೇಕತೆಯನಾಂತಿರ್ದ ವಿಶ್ವಸೃಷ್ಟಿಯ ವೈವಿಧ್ಯಚಿತ್ರಮಂ ಚಿತ್ರಿಸುತೆ ಬೃಹಲ್ಲೀಲಾಸೂಕ್ಷ್ಮತೆಯ ದ್ಯೋತಕಂಬೆತ್ತು ನರ್ತಿಸುತೆ ಪ್ರಜ್ವಲಿಸು ತಿರ್ದಂ, ಕತ್ತಲೆಯ ಮಾಯೆಯುಂ ಹರಿಸುತಜ್ಞಾನದಾ ಕುರುಡಿಂಗೆ ಜ್ಞಾನ ಜ್ಯೋತಿಯ ದಿವ್ಯದಿಟ್ಟಿಯೊಳ್ ದರ್ಶನವನೀಯುತ್ತೆ ಮೇಣಧ್ಯಾತ್ಮನೊಳ್ ಮರ್ತ್ಯನಿಂಗಮೃತತ್ವದಾ ಸತ್ಯಮಂ ಕರುಣಿಸಿ.

ಸತ್ಯತಪಧರ್ಮನಿಯಮಂಗಳಿಂ ಧರೆಯನಾಳಿರ್ದರಸುಗಳ್ ಕೈ ಕೊಂಡ ಯಾಗಾದಿ ಸತ್ಕರ್ಮಶತಕದಿಂ ಪಾವನಮೆನಿಪ್ಪಾ ನಾಡಿನಮು ರತ್ನಮಂ ಕೀರ್ತಿಸುತೆ ಬೆಳಗಿರ್ದ ಸಾಕೇತದೈಸಿರಿಯನೀಕ್ಷಿಸಲ್ ನಳ ನೃಪಂ ದಿಟ್ಟಿಯನ್ನಟ್ಟಿರ್ದೊಡೇಂ? ಕವಿದಿರ್ದ ಕತ್ತಲೆಯೊಳಾಜ್ವಲನ ಜ್ಯೋತಿಯ ಮಾಲೆಯನ್ನಲ್ಲದೇನಂ ಕಾಣದಾ ನೃಪಾಲಕಂ ಬಗೆಗೊಳ್ಳು ತ್ತೆಲ್ಲಮಂ ಮೈಮರೆಯೆ ಚಿಂತಿಸಲ್ ಧ್ಯಾನಸ್ಥನಾಗಿರ್ದನೆನೆ ತಪಸಿಗಳ ತೆರದಿಂದೆ ಮಾನಸದೊಳರಸುತಿರ್ದಾ ಚಿತ್ತಮಂ ಬೆಳಗಿಪಾತ್ಮಜ್ಯೋತಿಯಂ ಮೇಣಂತೆಯೇ ಚಿತ್ತಜಾರಿಯ ಕೃಪೆಯ ದಿಟ್ಟಿಯಂ ಮತ್ತವನ ಮಕುಟ ಮಣಿಯಾ ಶೈತ್ಯಕಿರಣಮಂ.

ಅನ್ನೆಗಂ ಭೂಗಗನಮಂ ಮುತ್ತಿಟ್ಟತಾಣದೊಳ್ ಸುರಪ ದಿಗ್ವನಿತೆ ತಾಂ ತುಟಿತೆರೆದು ಕುಂದಕುಟ್ಮಲ ಮಾಲೆಯೆನೆ ದಂತಪಂಕ್ತಿಯ ಕಾಂತಿ ಯಂ ಸೂಸುತ್ತೆ ನಗುವೊಗದಿ ಕುಮುದಮೆನೆ ಮಂದಹಾಸದ ಪ್ರಭೆಯ ಬೀರುತ್ತೆ ಶುಭ್ರಾಂಬರದ ಮುಂಜೆರಗನೆಳೆದೆಳೆದು ಕಂಬುಕೊರಳಂ

ಹೊರಳಿಸುತೆ ಸಂಭ್ರಮದಿ ನಲಿದಾಡೆ ನಳನೃಪಾಲಕನಿಲ್ಲದಾ ನೈಷಧದ ನಾಡಿನೊಲ್ ವಿಶಾಲ ತಾರಾಂಬರಂ ಕಾದಿರಲ್ ತಂಗದಿರ ತಾಂ ಮೂಡಿ ಬಂದಂ ತನ್ನೊಲ್ಮೆಯಾ ಬೆಳ್ನಗೆಯ ಮುತ್ತುಗಳ ದಿಗ್ದೆಸೆಯೊಳೆಲ್ಲೆಲ್ಲಿಯುಂ ಚೆಲ್ಲುತ್ತೆ ತನ್ನವನನಾ ನಳನ ಸಂತೈಸಲೆಂದು.

ಕಡಲಕಡೆದಿರ್ದಂದುತಾಂ ಕೌಸ್ತುಭ ಶ್ರೀರಮಣಿಯರ ಮೇಣ್ ಸುರಭಿ ಚೌದಂತಗಳ ಜತೆಯಾಗಿ ಪುಟ್ಟಿರ್ದ ಚಂದಿರಂ ಮಣಿಮಯದ್ಯುತಿ ಯಿಂದೆ ಜೊನ್ನಸಿರಿಸುರಿದು ಸುಂದರಿಯ ಮೊಗದಂದದಿಂ ನೊಂದೆದೆಗೆ ಶಾಂತಿಯಾ ಸೊದೆಗರೆದು ರಸಿಕಜನ ಸುರಧೇನುವೆನೆ ಮನೋಲ್ಲಾಸಮಂ ಕರುಣಿಸುತೆ ಸರಸಿಯಂ ಕದಡಿ ಸೊಂಡಿಲಕರದಿ ನೀರಂ ಚಿಮ್ಮಿ ಫೇನಮಯ ಮುಕ್ತಾಳಿಯಂ ವ್ಯೋಮದೆತ್ತರಕೆ ಹಾರಿಸುವ ಹಸ್ತಿ ಯೊಲ್ ಕದಿರಕೈಯಿಂ ಕಡಲಬಡಿಬಡಿದು ತೆರೆಯನೆಬ್ಬಿಸುತೆ ಮೇಣು ಬ್ಬಿಸುತೆ ಮೇಲೇರುತಿರ್ದಂ ಗಗನ ದೀಪದ ತೆರದಿ. ವಿಶ್ವಕರ್ತಂ ಕಾಲ ಸೂತ್ರವ ಜಗ್ಗುತಿರಲು ಕಪ್ಪಲ್ಲದೇನನುಂ ಕಾಣದಾ ಠಾವಿನೊಳ್ ಕೆನೆವಾಲ ಚೆಲ್ಲಿದಂತೆಲ್ಲ ದೆಸೆಯಂ ಬೆಳಗುತ್ತೆ ಚಂದ್ರಿಕಾವರ್ಷ ತಾಂ ಬೀಳುತಿರೆ ತಾನುಮಂತೆಯೇ ತಾನಿದ್ದ ಮರದಡಿಯುಂ ಅಲ್ಲದೆಲ್ಲಿಯುಂ ಕಪ್ಪಿರದೆ ಹೊಳೆಹೊಳೆವ ಬೆಳ್ಳಿಯಿಂ ಸಾರಣೆಯಗೊಟ್ಟಂತೆ ಹೊಳೆಯುತಿರೆ ನಳ ನೃಪಂ ಕತ್ತೆತ್ತಿ ಕೌತುಕದೊಳಂಬರವ ನೋಡಿದಂ ಸಾಕೇತದತ್ತಣಿಂ ದೃಷ್ಟಿಯಂ ಹೊರಳಿಸುತ್ತೆ. ಗಣನೆಯಿಲ್ಲದ ಕೋಟಿ ಸಂಖ್ಯೆಯ ಚುಕ್ಕಿಗಳ್ ಚಂದಿರನ ಪ್ರಜಾಕೋಟಿಯೆನೆ ತಾರಾಂಗಣದಿ ಮಿನುಗುತಿರೆ ನೃಪವ ರೇಣ್ಯಂ ತನ್ನ ವಂಶದ ಹಿರಿಯನಂ ನೋಡುತ್ತೆ ತನ್ನನುಂ ತನ್ನನೈಷಧ ವನುಂ ನೆನೆಯುತ್ತೆ ಪೂಜ್ಯ ಬುದ್ಧಿಯೊಳೇನನೋ ಯೋಚಿಸುತೆ ಮುಂದ ಣಾಶೆಯು ಚಿಗುರುತಿರೆ ಗುಡಿಕಟ್ಟಿ ಮನದೊಳಗೆ ಕಿರಿದಾದ ಶಾಂತಿಯಂ ತಾಳ್ದಲ್ಲೆ ತರುಮೂಲದೊಳ್ ತಲೆಯಿಟ್ಟು ಪವಡಿಸಲ್ಕನ್ನೆಗಂ ದುರ್ದಸೆ ಯೊಳೆಲ್ಲಿಯೊ ಬಿಟ್ಟು ನಡೆದಿರ್ದ ನಿದ್ರೆ ತಾಂ ಬಂದರಸನಂ ವ್ಯೆತಬ್ಬುತಾ ನಂದಮಂ ಪಡೆದಿರ್ದುದು. ನೈಷಧದ ಸುಖತಲ್ಪಶಯನದಿಂ ಪಳಗಿರ್ದ ಭೂವರಂ ಭೂಶಯ್ಯೆಯೊಳ್ ತೋಳದಿಂಬಿನ ಪಾಂಗಿನಿಂ ಮುದುಡಿ ಮಲಗಿರ್ದೊಡಂ ಮಾನಸಿಕ ವಿಶ್ರಾಂತಿಯೆನೆ ಗಾಢ ನಿದ್ರೆಯೊಳಲ್ಲಿ

ಸುಖವಾಗಿ ಪವಡಿಸುತೆ ತನ್ನತಾಂ ಮರೆತಿರ್ದನಾತಂ ಅದ್ವೈತಯೋಗ ದೊಳ್ ಮೈಮರೆದ ಮಹಾಯೋಗಿಯಂತೆ.

ಅಸಿತ ಪಕ್ಷದ ಚಂದ್ರತಾಂ ಶೈತ್ಯ ಕಿರಣಮಂ ಚೆಲ್ಲುತೋರಂತೆ ಮೇಲೇರಿ ಕೆಳಗಿಳಿಯುತಿರೆ ಗಗನದೊಳ್ ಕ್ರಮದಂತೆ ಸಾಗುತಿರ್ದುದು ರಾತ್ರಿ ತಾಂ ನಿಷಧಾಧಿಪನ ನಿದ್ರೆಯೊಲ್ ಮೇಣಿಂದ್ರಿಯಂಗಳ ಮುಖದಿ ಪಡೆವ ಸುಖದಾನಂದದಂತೆ.

ನಿದ್ರೆರಾತ್ರಿಗಳೆರಡುಮಿೂ ತೆರದಿಂದಲೊಂದಾಗಿ ಸರಿಯುತಿರೆ ಗರಿಗಳಂ ಕೊಡಹುತ್ತೆ ಮತ್ತೊಂದು ಕೋಗಿಲೆಯು ತಾಂ ತನ್ನವರೆಲ್ಲರಂ ದನಿಗೈದು ಕರೆಯಿತೆನೆ ಪಿಕದುಲಿಯ ಜತೆಗೊಂಡು ನೂರಾರು ಪಕ್ಷಿಗಳ್ ತೊಡಗಿದುವು ಸುಪ್ರಭಾತದ ಗೀತಮಂ ಹಾಡುತ್ತೆ ನಳನೃಪನ ಹರಸಲೆಂದು. ತಂಗಾಳಿ ತಾಂ ತೀಡುತೊಡನೊಡನೆ ಬಂದಾಮರದ ಹಣ್ಣೆಲೆಗಳಂ ಬೀಳಿಸುತೆ ಮಂತ್ರಾಕ್ಷತೆಯನೆರಚಿತೆನೆ ಮತ್ತಂತೆಯೇ ಕುಸುಮ ಸೌರಭವನಾಂತಿರ್ದು ಪನ್ನೀರ ಸೇಚನದ ಲಾವಂಚವ್ಯಜನದಿಂ ಬೀಸುತ್ತೆ ಮತ್ತುದಯಮಂ ಸೂಚಿಸಿತ್ತೆನೆ ಭೂವರೇಣ್ಯಂ ನಿದ್ರೆಯಿಂ ಮೈಮುರಿದು ಮೇಲೆದ್ದು ಕುಳಿತಾಕಳಿಸಿ ಕೈ ಎರಡರಂ ತಿಕ್ಕುತಾಘ್ರಾಣಿಸುತೆ ವದನಮಂ ಸವರುತಂಗೈಯ್ಯ ಬುಡದಿಂದೆ ಕಣ್ಗಳನ್ನೊರಸುತ್ತೆ ನೋಡಿದಂ ದೂರ ಪೂರ್ವ ದಿಗಂತಮಂ ಮೇಣ್ ಕೆಂಪಂಚಿನಂಬರವನುಂ.

ನಿಯಮದಿಂ ಸಪ್ತಾಶ್ವಸೂತ ತಾಂ ಜಗ್ಗುತಿರೆ ವಾಘೆಯಂ ಹಯತತಿಯ ಖುರಪುಟದ ಘತಿಯಿಂದೆ ಮೇಲೆದ್ದ ಕೆಂಧೂಳಿಯುಭ್ರಮಂ ಮುಸುಕಿತೆನೆ ಕುಂಕುಮಾಂಕಿತವರ್ಣದಿಂ ಗಗನಾಂತರಂ ಚೆಲ್ವಾಗಿ ಮುಂಬೆಳಕು ಚೆಲ್ಲಿರ್ದುದು.

ಕಾಲಮಂ ಕಡೆಗಣಿಸಿ ಹಿರಿದಾಸೆಯಿಂದವಸರದಿ ತಾಯಿ ತನ್ನ ಮೊಟ್ಟೆಯಂ ಬಲವಂತದಿಂದೊಡೆಯಲಾ ವಿನತಾತ್ಮಜಂ ಕಾಲಿಲ್ಲದೆಯೆ ಜನಿಸುತೆ ಕರ್ಮಸಾಕ್ಷಿಯ ರಥವ ತಾಂ ನಡೆಸುತಿರ್ಪಂ ತನ್ನಂಬೆಯಾ ಕರ್ಮಕ್ಕೆ ತಾಂ ಸಾಕ್ಷಿಯೆಂದು. ಜಗಕೆಲ್ಲ ತಾನೊಂದೆಕಣ್ಣೆಂದು ಮತ್ತೊಂದರಂ ಕರುಣಿಸಲ್ಕಾ ಸೂತನಂ ಮುಂದಿಟ್ಟು ಕಾಲಕರ್ಮಂಗಳಂ ನಿರ್ದೇಶಿಸುತೆ ಮತ್ತದರ ಗೂಢಾತ್ ಗೂಢತರ ಮರ್ಮಮಂ

ಸಾರುತ್ತೆ ಸತ್ಯಮಂ ಜ್ಞಾನಮಂ ಮೇಣವುಗಳಾ ಮರ್ಮ ಬ್ರಹ್ಮಮಂ ಮಂತ್ರದೊಳ್ ಬೋಧಿಸುತೆ ತ್ರೈಲೋಕ್ಯದೀಪನಾ ರವಿಯು ತಾಂ ಸುತ್ತು ತಿರ್ಪಂ ನಿಚ್ಚಮಾ ಲೋಕಮಂ ನಿಯಮದೊಳ್ ಮೂಡಿ ಮುಳುಗಿ.

ಮಾರ್ತಾಂಡನಿಂ ಪಡೆದಿರ್ದ ತೇಜದೊಳೆ ಹೊಳೆಹೊಳೆದು ಬಾಂದಳದಿ ಮಿನುಗುತಿರ್ದನಿತೆನಿತೋ ತಾರೆಗಳ್ ಮತ್ತದೇ ತತ್ವಸಾರಮನುಂಡು ಬೃಹದ್ ಬ್ರಾಹ್ಮಸೂತ್ರಮಂ ಮನಗಂಡು ಕರ್ಮಮಂ ಮೇಣ್ ಧರ್ಮಮಂ ನಿರ್ನೈಸಿ ತಾಂ ತಮ್ಮ ಕರ್ಮಂಗಳಿಂ ತಾವ್ ಪಡೆದ ಜ್ಞಾನದೊಳ್ ಹೋಮಿಸುತೆ ಮತ್ತದರ ಫಲವನಾ ಲೋಕಕಲ್ಯಾಣ ಕರ್ತಂಗರ್ಪಿಸುತೆ ಜೀವನ್ಮುಕ್ತತೆಯನಾಂತಿರ್ದ ಮಹರ್ಷಿಗಳ ತೆರದಿಂದೆ, ತಮ್ಮ ತೇಜದ ಕಾಣ್ಕೆಯಂ ಮೂಲಶಕ್ತಿಯ ಮುಂದೆ ತ್ಯಾಗಬುದ್ಧಿಯೊಳರ್ಪಿಸುತೆ ಅದ್ವೈತದೊಳ್ ಜೀವೈಕ್ಯಮಂ ಪಡೆದಿರ್ದುವೆನೆ ಪ್ರಾಕೃತಿಕ ಪರ್ಯಾಯದೊಳ್ ಮತ್ತೊಂದೊಂದೆ ಮರೆಗೊಂಡುವು.

ಹೊತ್ತಾರೆ ತಾರಕೆಗಳೊಂದೊಂದೆ ತಂತಮ್ಮ ಕಪ್ಪಮಂ ತೆತ್ತು ಮೂಡಿಬಹ ಸೂರ್ಯನಂ ಸೇರಿರ್ದೊಡೇಂ ಪಡುಗಡೆಯೊಳುಡುಪ ತಾನಿನ್ನುಮಾ ಪೂರ್ಣಬಿಂಬದ ದರ್ಶನಾನಂದಮಂ ಪಡೆವ ಕೌತೂಹಲದಿ ಕಾದುನಿಂತಿರ್ದನಂತೆಯೇ ನಳನೃಪಂ ಮೇಲೆದ್ದು ಕಟ್ಟೆಯನ್ನಿಳಿದಲ್ಲಿಯೇ ಸಾಕೇತಮಾರ್ಗದೊಳ್ ಮತ್ತೇನನೋ ಯೋಚಿಸುತೆ ಹೊಂಬೆಳಕ ಕಾದಿರ್ದನು.

ಮತ್ತನಿತರೊಳ್ ಮಂಗಲೋತ್ಸವದ ಮನೆಯ ಮುಂಭಾಗದೊಲ್ ಗಗಣಾಂಗಣಂ ರಂಗುರಂಗಿನ ರಂಗವಲ್ಲಿಯಿಂ ರಂಜಿಸಿರೆ ಪೂರ್ಣಾಹುತಿಯಗೊಂಡಿರ್ದ ಯಾಗಾಗ್ನಿಯಂತಿಂದ್ರದಿಗ್ಭಾಗತಾಂ ಸ್ವರ್ಣಪೀತದ ವರ್ಣದಿಂ ಮಿರುಗುತಿರೆ ತಾತ್ವಿಕ ಪ್ರಭಾಕಿರಣಂಗಳಿಂ ಮುಮುಕ್ಷುಗಳ ಹೃತ್ಕಮಲಮಂ ಬಿರಿಯಿಸುತೆ ರಾಜೀವ ಮಿತ್ರತಾಂ ನೃಪವರೇಣ್ಯನ ಮನದಿ ಮುಂದಿನುದ್ಯೋಗಮಂ ಪ್ರೇರಿಸುತೆ ಮಾರ್ಗದರ್ಶಕನಾಗಿ ಮೂಡಿರ್ದ ನಂಬರದಿ ಸಂಭ್ರಮದೊಳು.

ಉದಯಾದ್ರಿ ಶಿಖರದಿಂ ಬಂದಿಳಿದ ಬಾಲಾರ್ಕ ಕಿರಣಮಂ ಕಂಡುಲ್ಲಸದಿ ಕೊಂಡಾಡಿ ಮತ್ತವನ ವಂದಿಸುತೆ ಮುಂದಡಿಯನಿಟ್ಟೊಂದೊಂದೆ

ಹಜ್ಜೆಯಿಂ ಕಾಲ್ತೆಗೆದು ಕೈಮುಗಿದು ಶಾಂತಿಯಾ ಸೊದೆಗರೆದು ಸುಖ ನಿದ್ರೆಯಂ ಕರುಣಿಸಿದ ಮೇಣ್ ನೊಂದಿರ್ದ ತನ್ನೊಡಲ ಸಂತೈಸಿದಾ ದಿವ್ಯತರ ತಾಣಮಂ ಭೂವರೇಣ್ಯಂ ಪಿಂತಿರುಗುತೀಕ್ಷಿಸುತೆ ನಡೆನಡೆದು ಮನವನಾ ನೆಮ್ಮದಿಯ ಧೈರ್ಯದಿಂ ಬಿಗಿವಿಡಿದು ಮುಂದುಮುಂದಕೆ ಸಾಗುತಿರ್ದಂ ಪೂರ್ವಪುಣ್ಯಂ ದೃಷ್ಟಮಲ್ಲದ ಸೂತ್ರದೊಳ್ ಮನವನೆಳೆ ದೆಳೆದು ದೇಹಮಂ ಸೆಳೆಯುತಿರ್ದಂತೆ ಕೆಳಗಿಳಿದು ಕೋಸಲದ ಮಾರ್ಗ ದೊಳ್ ಪಾಂಥನಾಗಿ.

ಹೊತ್ತೇರುತಿರ್ದಂತೆ ಮುನ್ನಡೆಯುತಿರ್ದಾ ನಳಂ ಹರದಾರಿಯಾ ದೂರಮಂ ನಡೆನಡೆದು ಬಹು ದೂರದೂರದೊಳ್ ಮುಂದೆ ಕಂಡಂ ಮನು ಕುಲದ ಕೀರ್ತಿಯಂ ಕೆತ್ತಿ ಶತ್ರು ದುರ್ಭೇದ್ಯಮೆಂದೊತ್ತಿ ಚಿತ್ರಿಸುತೆ ಮೇಲೆತ್ತರದಿ ಕಟ್ಟಿರ್ದ "ಕೋವಿದಾರ ಧ್ವಜ"ವನಾ ಸಾಕೇತಕುಲ ಕೇತನ ವನುಂ ಮತ್ತದರ ಪುರಾತನದ ಪೆಂಪಿಂದೆ ಕಳೆಗೊಂಡ ಕೋಸಲದ ಮಹಾ ನಗರಮಂ ಅಯೋಧ್ಯೆಯಂ.

ಬಾಹುಕಂ ಮುಂದೈದಿ ಮಾರ್ಗದಿಕ್ಕೆಲದಿ ರಮ್ಯತೆಯನಾಂತಿರ್ದ ಹೊರಬಯಲ ಮೇರೆಯನ್ನಾವರಿಸಿ ಬೆಳೆದು ಚಿತ್ರತರವಾಗಿ ರಂಜಿಸುತೆ ಮುಳುಕೋಂಟೆಯೊಳ್ ಹಬ್ಬಿ ಹೂಬಿಟ್ಟಿರ್ದೆಳೆಯ ಬಳ್ಳಿಗಳ ಸೊಬಗ ನೀಕ್ಷಿಸುತೆ ಮುಂದಲ್ಲಿ ಪುಷ್ಕರಿಣಿಯಂ ಬಳಸಿನಿಂದಿರ್ದ ಹೂದೋಟಮಂ ಮತ್ತದರ ತರತರದ ಸೌಂದರ್ಯಮಂ ನೋಡಿ ನಡೆಯುತಿರೆ ಪಾತಾಳ ದಾಳಮಂ ಸೂಚಿಸುವ ಕಂದಕವನುಂ ಮೇಣ್ ಗಗನಮಂ ಮುಂಡಾಡು ತಿರ್ದುದೆನೆ ಮಹೋನ್ನತವಾಗಿ ಮೇಲೆದ್ದು ನಿಂದಿರ್ದ ಕೋಂಟೆಯಂ ಕಾಣುತೋರಂತೆ ನಡೆನಡೆದು ಬಂದು ಸೇರ್ದಂ ದುರ್ದಮ್ಯದುರ್ಗದ ಮಹಾದ್ವಾರಮಂ.

ಕಿಕ್ಕಿರಿದ ಜನಸಂದಣಿಯುಮಾ ಹಿರಿದಾದ ಬಾಗಿಲೊಳ್ ನುಗ್ಗು ತತ್ತಿತ್ತ ಸಂಚಾರಮಂ ಗೈಯ್ಯುತಿರೆ ನಾಚುತ್ತೆ ಬಾಹುಕಂ ಕೋಂಟೆಯಂ ದಾಂಟುತ್ತೆ ರಾಯಬೀದಿಯ ಪಿಡಿದು ಸುತ್ತಾಡುತಿರ್ದಂ, ನಗರದೊಳ್ ನೆಲೆಗೊಂಡ ಮತ್ತೊಂದೊಂದೆ ಸೌಂದರ್ಯದಾನಂದಮಂ ಮೇಣ್ ವೈಭವಂಗಳಂ ಕಣ್ದಣಿಯೆ ನೋಡಿನೋಡಿ. ನಾಗರಿಕಜನಮನದ ಶುದ್ಧ

ತೆಯ ಬಿಂಬಿಸುತೆ ನೈರ್ಮಲ್ಯದಿಂ ಸುಖದ ಹೆದ್ದಾರಿಯಂ ಕಾಣಿಸುತೆ ವಿಸ್ತಾರವಾಗಿರ್ದ ನೂರಾರು ರಾಜಮಾರ್ಗಂಗಳಂ ಮತ್ತವುಗಳಿಕ್ಕೆಲದಿ ಸಾಲುಸಾಲಾಗಿ ನೆಲಗೊಂಡ ಭವ್ಯತರ ವಾಣಿಜ್ಯ ಭವನಂಗಳಂ ಪುರ ಜನದ ಸುಖಸಿರಿಯ ಸೌಭಾಗ್ಯಮಂ ರೂಪಿಸುತೆ ಕಟ್ಟಿರ್ದ ಮತ್ತೆನಿತೆನಿತೋ ಪ್ರಾಸಾದಹರ್ಮ್ಯಂಗಳಂ ವಿಮಾನಸಮಗೋಪುರಂಗಳಂ ಶಿಖರಶಿರ ಸುಧಾ ಮಂಗಳಂ ಧರ್ಮದೇವತೆಯ ವಿಹಾರಸ್ಥಾನಮೆನೆ ದಾನಕರ್ಮಂಗಳಿಂ ರಂಜಿಸುವ ಧರ್ಮಶಾಲೆಗಳನಂತೆಯೇ ಅನ್ನಸತ್ರಗಳಂ ಬಡತನಮದೇ ನೆಂದು ಕಂಡಿಲ್ಲದಿರ್ದೊಡಂ ವಿರಳತೆಯೊಳಲ್ಲಲ್ಲಿ ಹರಡಿರ್ದ ಸಾಮಾನ್ಯತರ ಸದನಂಗಳಂ ನೋಡುತ್ತೆ ಕ್ರಮಿಸುತಿರ್ದಂ ನಳಂ ಕಾಣುತಿಹ ಸಂಪದಕೆ ಶಿರಬಾಗಿ. ಮುಂದೆ ಕಂಗೊಳಿಪ ತಿಳಿನೀರ ಕೊಳಗಳಂ ಕೊಳಂಗಳೊಳ್ ಬೆಳೆದು ಬಿಳುಪಾಗಿ ಬಿರಿದರಳಿ ಪರಿಮಳವ ಬೀರುತಿಹ ಕಮಲಂಗಳಂ ನೀರ್ಗಿಳಿದು ನೆಗೆದಾಡಿ ನರ್ತಿಸುವ ಹಂಸಗಳನಂತೆಯೇ ನೀರ್ವಕ್ಕಿಗಳ ಬಣಗಳಂ ಮತ್ತಲ್ಲೆ ಪುನ್ನಾಗ ಕರವೀರ ಪಾಟಲಂ ಮೇಣ್ ಚಂಪಕಂ ಮಂದಾರ ಪಾರಿಜಾತಾದಿ ಕುಸುಮತರು ಸಂದೋಹದಿಂ ಜಾಜಿ ವನ ಮಲ್ಲಿಕಾದಿ ಪರಿಮಳಿಪ ಪುಷ್ಪಗುಲ್ಮಂಗಳಿಂ ಮತ್ತಿತರ ತರತರದ ಕಂಪಿಡಿದ ಸುಮಗಳಿಂ ಸುರಲೋಕ ನಂದನಂ ಧರೆಗಿಳಿದು ನಿಂದುದೆಂದೆನೆ ಪ್ರಕೃತಿ ತಾಂ ಸಾಕೇತಸಿರಿಯಡಿಯ ತಾವರೆಗೆ ಸಲ್ಲಿಸಿದ ಪುಷ್ಪಾಂಜಲಿಯ ತೆರದಿಂದೆ ಸೊಂಪಾಗಿ ಬೆಳೆದು ವಿರಾಜಿಸುತ್ತಾನಂದಮಂ ಕರುಣಿಸುವ ಕುಸುಮವನ ರಾಜಿಯಂ ಕಾಣುತ್ತೆ ನೃಪವರೇಣ್ಯಂ ನಡೆನಡೆದು ತಿರುಕಪಾತ್ರದ ಸತ್ರ ದೊಳ್ ಹೊಟ್ಟೆಯಂ ತುಂಬಿಸುತೆ ಮೇಣಲ್ಲೆ ವಿಶ್ರಾಂತಿಯಂ ಪಡೆದಿರ್ದನು. ಬಾಹುಕಂ ಬೈಗಿನೊಳ್ ಮೇಲೆದ್ದು ಕ್ರಮಿಸುತ್ತೆ ವಿಧವಿಧದ ಪುಷ್ಪ ವಾಟಿಯ ಬಗೆಬಗೆಯ ಸೊಬಗನೀಕ್ಷಿಸುತೆ ಮಹಾರಾಜ ಮಂದಿರದ ಮುಂದೆಸೆವ ಕಿರುಕೋಂಟೆಯಂ ಬಳಸಿ ನಿಂದಿರ್ದ ಸೈನಿಕರ ಪಂದ್ಯಾಟದಾ ಬಯಲರಂಗಮಂ ಬಂದು ಸೇರ್ದಲ್ಲಿ ಕಂಡಂ ಕುದುರೆಗಳ ಮೇಲೇರಿ ದೌಡಾಯಿಸುತೆ ಮತ್ತಲ್ಲಲ್ಲಿ ಬಿದ್ದುರುಳಿ ನೋಯುತ್ತೆ ನೋಟಕರ ಚಪ್ಪಾಳೆ ಗುಲ್ಲುಗಳ ಚೇಷ್ಟೆಯಿಂ ಸಿಡುಕುತ್ತೆ ಮತ್ತಡಿಗಡಿಗೆ ಶಿಕ್ಷಕರ ಸೂಚನೆಗೆ ಸರಿಯಾಗಿ ವರ್ತಿಸುತೆ ಅಭ್ಯಾಸಗೋಷ್ಠಿಯೊಳ್ ವ್ಯೈಮರೆದ ಬಾಲಕರ ಶ್ರದ್ಧೆಯಂ ಮೇಣವರ ತಿದ್ದಿ ಬೋಧಿಸುತಿರ್ದ ಶಿಕ್ಷಕರ ಸಾಹಸವನುಂ.

ನಿಂದಲ್ಲಿ ಕತ್ತೆತ್ತಿ ಸಗರವಂಶಾಧಿಪರ ಸತ್ಕೀರ್ತಿಕಳಶಂಗಳಂ ಪೊತ್ತು ಮುಗಿಲನಾವಗಂ ಮುತ್ತಿಡುವ ಸೌಧಂಗಳಿಂ ಸಿತಾಸಿತ ಶಿಲೆಗಳಿಂ ಕಳೆಗೊಂಡ ಚಂದ್ರಶಾಲೆಗಳನಂತೆಯೇ ಶಿಲ್ಪಕಲಾನೈಪುಣ್ಯಮಂ ಕೆತ್ತಿರ್ದ ಗೋಪುರಂಗಳಿಂ ಮೇಣ್ ಆಸ್ಥಾನಭವನ ವೈಶಾಲ್ಯದಿಂ ಕೂಡಿರ್ದ ಸಾಕೇತ ಶ್ರಿನಾಥರರಮನೆಯ ಸೌಭಾಗ್ಯಮಂ ಮತ್ತದೇಸತ್ಕುಲದ ಸತ್ತಿಗೆಯ ನೆಳಲಿನೊಳ್ ಧರೆಯನಾ ಸದ್ಧರ್ಮದಿಂದಾಳ್ವ ಋತುಪರ್ಣ ಭೂವರೇಣ್ಯನ ರಾಜಭವನಮಂ ನಿಷಧೇಶತಾಂ ನೋಡಿದಂ ವಿಸ್ಮಯಾನಂದದನುಭವಂಗಳ್ ಮೂಡಿಬರಲು.

ಅನ್ನೆಗಂ ಬಯಲಿನೊಳ್ ಬಾಲಕರ ಬೀಳಿಸುತೆ ತಡೆದಿರ್ದ ರಾಹುತರ ನಿರ್ಲಕ್ಷ್ಯದಿಂ ಕೊಡಹುತ್ತೆ ನೆರೆದಿರ್ದ ಜನರನಲ್ಲಿಂ ಚೆದರಿಸುತೆ ಪಳಗದಿರ್ದೊಂದು ಪೊಸತೇಜಿತಾಂ ತನ್ನ ಮರುಳಾಟದಿಂ ನೋಟಕರ ನಟ್ಟುತ್ತೆ ಭೀತಿಯಂ ಬೀರುತಿರೆ, ನೋಡುತಿರ್ದಾ ನಳಂ ನಸುನಗುತ ಬಳಿಗೈದಿ ಕುದುರೆಯಂ ಕೊರಳ ಕೇಶದೊಳ್ ಬಿಗಿವಿಡಿದು ಕಿವಿಹಿಂಡಿ ಮೇಲೇರಿ ಕಡಿವಾಣಮಂ ಜಗ್ಗಿ ಭರದೊಳಾ ಬಯಲಿನೊಳ್ ತಿರುಗಿಸಿದನತ್ಯಂತ ವೇಗದೊಳ್ ಬಳಲಿದಾ ಪ್ರಾಣಿ ತಾಂ ಪಳಗಿ ಹಣ್ಣಾಗುತಿರಲು. ನೋಡುತೀ ನೋಟಮಂ ಬೆಕ್ಕಸದೊಳೆಲ್ಲರುಂ ಪೊಗಳಿದರ್ ಬಾಹುಕನನಂತೆಯೇ ನಿಲ್ಲಿಸಲ್ ಕುದುರೆಯಂ ಕೊಂಡಾಡಿದರ್ ಬಹುವಿಧದಿ ಮತ್ತೊಂದು ಕೋಲಾಹಲದ ಬೊಬ್ಬಾಟದಿಂ ಜಲನಿಧಿಯ ಘೋಷದಂತೆ.

ವಾಜಿಯಂ ಬಳಲಿಸುತೆ ಪಳಗಿಸಿದ ಸೋಜಿಗದ ವಾರ್ತೆತಾಂ ಗಜಬಜಿಸಿ ದೊರೆಯನಕ ಸಾಗಿರಲ್ ಕೋಸಲಾಧೀಶ್ವರಂ ಕರೆಸುತೀ ಬಾಹುಕನ ಮನ್ನಿಸುತ ಮೆಚ್ಚಿನುಡುಗೊರೆಯಿತ್ತು ವಿನಯದಿಂ ಬೆಸಗೊಂಡು ನೇಮಿಸಿದ ತಾಂ ತನ್ನ ತುರಗಂಗಳ ಕಾಯಲೆಂದು. ಹಸಾದವೆಂದಾಣತಿಯನೊಪ್ಪಿರ್ದ ಬಾಹುಕಂ ವಿಧಿವಶದಿ ಋತುಪರ್ಣ ಭವನದೊಳ್ ತುರಗಂಗಳಂ ಕಾಯುತ್ತೆ ಸೇವೆಯಂ ಗೈದನುದಿನಂ ಮನವ ಮೆಚ್ಚಿಸುತೆ ಮತ್ತಲ್ಲಿ ತೇಜಿಗಳ ಲಾಯದೊಳ್ ಮೇಲಿನಧಿಕಾರಮಂ ಪಡೆದಿರ್ದನು.

ರಾಜ್ಯಸೂತ್ರವಪಿಡಿದು ತನ್ನಂಕೆಯಿಂ ತಾನಾಳ್ದು ಬಹುವಿಧದ ಕೀರ್ತಿಯಂ ಗಳಿಸಿರ್ದ ಪೆರ್ಮೆಯಿಂ ಪೆಸರಾಂತ ಶಶಿಕುಲಾರ್ಣವ ಚಂದ್ರಮಂ ನಿಷಧೇಶ್ವರಂ ನಳನೃಪೋತ್ತಂಸಂ ಪರರಾಯರೂಳಿಗಕೆ ಕೈಚಾಚಿ ಸೇವೆಯಂ ಗೆಯ್ವಂತುಟಾ ವಿಧಿಯು ನಿರ್ದೇಶಿಸಲ್ ಕುದುರೆ ಗಳ ವ್ಯೆಯುಜ್ಜಿ ಮೇವಿತ್ತು ಪಾಲಿಸುವ ಹೊಣೆಯು ತಾಂ ಹೊತ್ತಿರ್ದನಾ ಬಾಹುಕಂ ಜನ್ಮಾಂತರದ ಋಣಶೇಷಮಂ ತೀರ್ಚಲ್ ಗಾಣದೆತ್ತಾಗಿ ಸೇರಿರ್ದ ಸಾಲಿಗನ ತೆರದಿ.

ನಿಷಧಾಧಿಪಂ ಕೈಕೊಂಡ ಸೇವೆಯೊಳ್ ತನುವ ತಾಂ ತೇದು ಸಾಕೇತಪುರದೊಳಿರೆ ಕುಂಡಿನಾಪುರದರಸು ಭೀಷ್ಮಕಂ ನಳನೃಪಾಲನ ಪರಿ ಭವದ ವಾರ್ತೆಯಂ ಕೇಳುತ್ತೆ ಮನನೊಂದು ಮೊಮ್ಮಕ್ಕಳಂ ಪತಿಕರಿಸಿ ವಾರ್ಷ್ಣೇಯನಂ ಕಳುಪುತ್ತೆ ಭೂದಿವಿಜರನ್ನಟ್ಟಿರ್ದನಾ ದೇಶದೇಶಂಗಳಂ ಪೊಕ್ಕು ನಳನಿರವನರಿಯಲೆಂದು.

ಇಂತರಸನಾಣತಿಯನಾಂತಿರ್ದಭೂಸುರರ್ ಸುತ್ತುತಿರೆ ಸುದೇವ ನೆಂಬೊರ್ವ ವಿಪ್ರತಾಂ ಕಂಡನಾ ಚೇದಿರಾಜ್ಯದ ರಾಜ ಭವನದೊಳ್ ರಾಜಗುವರಿಯಂ ಜತೆಗೂಡಿ ಹೃದಯಾಂತರಾಳದಿಂ ಚಿಮ್ಮುತಿಹ ದುಃಖದಿಂ ಬಾಡಿ ಕಳೆದುಳಿದ ತೇಜಮಂ ಮಲಿನಾಂಬರದಿ ಮುಚ್ಚುತ್ತೆ ಮತ್ತವಳ ಸೇವೆಯಂ ಗೈಯುತ್ತೆ ನಿಂದಿರ್ದ ತನ್ನರಸನಣುಗಿಯಂ ನಳನುಳಿದಿರ್ದ ದಮಯಂತಿಯಂ.

ದ್ವಿಜವರೇಣ್ಯಂ ಕಳೆದಿರ್ದ ಗೋಧನವ ಮರಳಿ ಕಂಡಂತೆ ಹರ್ಷ ದಿಂ ಕಾಣುತಾ ವೈದರ್ಭಿಯಂ ಮಾನಸದಿ ಮರುಗುತ್ತೆ ಮತ್ತವಳ ಬೆಸ ಗೊಳ್ಳುತಿರೆ ತಿಳಿಯುತಾಕೆಯ ಕಿರುಜನನಿ ತಾಂ ಸಂತಾಪದಿಂ ಕರಗುತ್ತೆ ಹಳಹಳಿಸಿ ಪತಿಗೊರೆದು ಸನ್ಮಾನದಿಂ ದಾಸಿಯರ ಜತೆಯಿತ್ತು ದಮಯಂ ತಿಯಂ ತನ್ನಣು ಗಿಸುನಂದೆಯಂವೆರಸಿ ಕಳಿಪಿದಳ್ ಭೂಸುರನ ನೆರವಿ ನೊಳ್ ಕುಂಡಿನಾಪುರವರಕೆ ಕಿರುಪಡೆಯ ಕಾಪಿನಿಂದೆ.

ಅಂದಣವನಿತ್ತಖಿಳ ಪರಿವಾರಮಂ ಕೈಗೊಳಿಸಿ ಗೌರವದಿ ಚೈದ್ಯೇಶ ನರಸಿ ತಾಂ ಕಳಿಪಿದೊರ್ಡಂ ತನ್ನನುಜೆಯಂ ಮೇಣೆಯೊಳ್ ಕುಳ್ಳಿರಿಸಿ

ಕಾಲ್ನಡಿಗೆಯಿಂ ನಡೆನಡೆದು ದಮಯಂತಿ ತಾಂ ಬಂದು ಸೇರ್ದಳು ತನ್ನ ತಾಯ್ಮನೆಯನಾ ಶೋಕತೋಷಂಗಳಿಮ್ಮಡಿಸಿ ಕೂಡುತಿರಲು.

ಸಿರಿಯು ರತ್ನಾಕರನ ಕೂಡಿರ್ದ ತೆರದಿಂದೆ ನಳನರಸಿ ಭೀಷ್ಮಕನ ಭವನಮಂ ಸೇರುತ್ತೆ ತಂದೆತಾಯ್ಗಳ ಕಂಡು ವಂದಿಸುತೆ ಪಿಡಿದಡಿಗಳಂ ಬಿಡದಡಿಗಡಿಗೆ ಹಣೆಗೊತ್ತಿ ಪಾದಂಗಳಂ ತೋಯಿಸಿದಳಾ ಕಣ್ಣೀರ ಕೋಡಿಯಿಂದೆ. ದಮನಋಷಿಯ ಮಂತ್ರಚೂತದ ಫಲದಿ ಮಗಳಾಗಿ ಜನಿಸಿರ್ದ ದಮಯಂತಿ ತಾಂ ವರಿಸಿರ್ದ ನಿಷಧಾಧಿಪನನ್ನುಳಿದಿರ್ದು ದೇಸಿಗರ ತೆರದಿಂದೆ ಬಂದೆರಗಿ ನಯನವಾರಿಯಂ ಸುರಿಸುತಿರೆ ಹೆತ್ತವರ್ ಶೂಲದೊಳ್ ಹೃದಯಮಂ ತಿವಿಯುತಿರ್ದಂತೆ ಮರುಗುತ್ತೆ ಮಾತಿಲ್ಲದೆಯೆ ಮಗಳ ತಾವಿರ್ವರುಂ ಪಿಡಿದೆತ್ತಿ ಮುಂಡಾಡಿ ತಳ್ಕಿಸುತೆ ಬಾಷ್ಪವಾರಿಯಂ ಸುರಿಸುತಿರ್ದಂತೆ ಬಂಧುಗಳ್ ಬಂದು ಮನಕರಗಿ ಮೌನದೊಳಗೆದ್ದಿರ್ದರಾ ಸಾಧ್ವಿಯಂ ಮತ್ತವಳ ಪಡೆದವರನುಂ ನೋಡುತ್ತೆನಿಂದು.

ಮತ್ತನಿತರೊಳ್ ವೈದರ್ಭೆತಾಂ ಪೆತ್ತ ಬಾಲಕರ್ ತಮ್ಮವ್ವೆಯಂ ಕಾಣುತೋಡುತೆ ಬಂದು ಮುಂಜೆರಗನೆಳೆದೆಳೆದು "ತಾತನೆಲ್ಲಿಹನೆ"ಂದು ಕೇಳುತಿರೆ ಹಮ್ಮೈಸಿ ಶೋಕಭಾರದಿ ಬಿದ್ದು ಬಿದ್ದಳುತೆ ತನ್ನೊಡಲ ಕುಡಿಗಳಂ ಪಿಡಿದಪ್ಪಿ ಮುದ್ದಿಸುತೆ ತನ್ನಳಲನಂತೆಯೇ ತನ್ನನುಂ ಪಡೆದವರ ಮೇಣ್ ಬಾಂಧವರ ದುಃಖದುದ್ವೇಗಮಂ ತಾನೆ ಸಂತೈಸುತ್ತೆ ತನ್ನರಸನಾನಂದಮುಖದಿಂದುವಂ ತನ್ನ ಮಕ್ಕಳ ಮುಖದಿ ಕಾಣುತ್ತೆ ಮತ್ತವರ ಮೇಲಿರ್ದ್ದ ಸಂಪ್ರೀತಿಯಿಂ ಮನವನಾ ಸಂತಸಕೆ ದೂಡುತ್ತೆ ಹರನಡಿಯ ನೆನೆನೆನೆದು ದಮಯಂತಿ ತಾಂ ತನ್ನ ಪತಿದೇವನಂ ಧ್ಯಾನಿಸುತೆ ಸದ್ಧೈರ್ಯಮಂ ತಾಳಿರ್ದಳು.

ದಿನದಿನದೊಳರಮನೆಯ ನಾರಿಯರ್ ಬಂದು ಬಂದಡಿಗಡಿಗೆ ಪರಿಭವದ ಕಥನಮಂ ಕೇಳುತಾತುರದಿಂದೆ "ಪತಿಯೆಲ್ಲಿ? ಮತ್ತೆಂತು ಬಿಟ್ಟಿರ್ದನೆ"ಂದೆನುತೆ ದಮಯಂತಿಯಂ ಬೆಸಗೊಳ್ಳುತಿರೆ ಕೈಮುಗಿದು ಪೇಳಲಾರೆಂ ಕೇಳದಿರಿ ನೀವೆಂದು ಸಂತೈಸುತವದಿರಂ ಬೀಳ್ಕೊಟ್ಟು ಮತ್ತಾಕೆ ಪತಿವಿಯೋಗದ ದುಃಖಮಂ ತಾಳಲಾರದೆ ಮನದಿ ಮೌನದೊಳ್ ಕೊರಗುತ್ತೆ ಬಳಲಿದಳ್ ಚಿತ್ತಮಂ ಬಿಗಿವಿಡಿದು ಸಾಧ್ವಿ ತಾಂ ಶೋಕಮಂ ತೋರಗೊ

ಡಡೆ. ಮಕ್ಕಳಂ ಕಂಡು ತನ್ನೊಡಲ ದುಃಖಮಂ ಮರೆವೆನೆಂ ಬಾಸೆಯೊಳ್ ಸುದತಿ ತಾಂ ಬಾಲರಂ ಲಲ್ಲೆಗೈದೊಲಿದು ಮುದ್ದಿಸುತೆ ದಿನಗಳಂ ಕಳೆಕಳೆದು ಪ್ರಾಣೇಶ್ವರನ ದುರ್ದೆಸೆಯನೆಣಿಸುತ್ತೆ ಕ್ಷಣಕ್ಷ ಣದಿ ಚಿತ್ತಮಂ ಬೇಯಿಸುತೆ ಮತ್ತವನ ನೆನೆನೆನೆದು ಚಿಂತಿಸುತೆ ಬಾಡಿ ದಳ್ ನೀರಿಲ್ಲದೊಣಗಿರ್ದ ತೋಟದಂತೆ.

ವೈವಾಹಪೂರ್ವದೊಳ್ ತಾನಿರ್ದ ಮಂದಿರದಿ ವೈದರ್ಭೆ ತಾಂ ಬರಿನೆಲದಿ ಮಲಗಿಚಿಂತಿಸುತಿರ್ದುದಂ ನೋಡುತ್ತೆ ತಂದೆತಾಯ್ಗಳು ಬಂದು ಪಿಡಿದೆತ್ತಿ ಮಗಳ ಕುಳ್ಳಿರಿಸಿ ಕುರುಳನೇವರಿಸಿ ಮರುಗುತ್ತೆ ಕೇಳುತಿರೆ ವಿಧಿವಶದಿ ಬಂದಿರ್ದ ಪರಿಭವದ ವಿವರಮಂ ಪೇಳಿದಳ್ ನಳನೃಪಾಲನ ರಮಣಿ ತಾಂ ಸಾದ್ಯಂತವಾಗಿ. ಮನಸಿನನುತಾಪಮಂ ಸಂತೈಸಿ ಕೇಳು ತಿರೆ ಪೆತ್ತವರ್, ಕಳೆದಿರ್ದ ಕಷ್ಟದೊಳ್ ಘಟ್ಟವೊಂದೊಂದರಂ ವಿವರಿಸುತೆ ತನ್ನರಸನನುಪಮಪ್ರೇಮಮಂ ವರ್ಣಿಸುತೆ ತನ್ನ ದೌರ್ಭಾಗ್ಯದಿಂದಾ ತನನ್ನಗಲಿ ಬಂದಿರ್ದುದಂ ವ್ಯಾಧನುಪಟಳವನಂತೆಯೇ ಹರದರಾತಿ ಥ್ಯಮಂ ಕರಿಘಟೆಯ ಬಾಧೆಯಂ ಮೇಣೆಲ್ಲ ಕಷ್ಟಮಂ ಹರಿಸಿರ್ದ ವಿಶ್ವ ಪಾಲನ ಹರನ ಕಾರುಣ್ಯಮಂ ಮತ್ತವನ ಮಹಿಮೆಯುಂ ಕೊಂಡಾಡಿ ಪೇ ಳುತಿರ್ದಳು ಸಾಧ್ವಿ ತಾಂ ಕೇಳ್ದವರ ಕರುಳೆಲ್ಲ ಕರಗಿ ನೀರಾಗಿ ಕಣ್ಣಿಂದೆ ಸುರಿಯುತಿರಲು.

ಶೋಕದಿಂದುಮ್ಮಳಿಪ ಕುವರಿಯಂ ಸಂತೈಸಿ ಭೀಷ್ಮಕಂ ದೂತರಂ ಕರೆದು ಕಳುಹಿದರ್ದಾ ನಳನನರಸುತ್ತೆ ದಿಗ್ದೇಶಮಂ ಸುತ್ತುತಾಳುಗಳ್ ಕಾಣಲಾರದೆ ನಳನನೆಲ್ಲಿಯುಂ ಬಂದು ಮಾಸಾಂತರದಿ ತಮ್ಮಾಳ್ದನಿಂ ಗೊಪ್ಪಿಸಲ್ ವರದಿಯಂ ಮಗಳಿಗಾ ವಾರ್ತೆಯಂ ಪೇಳಲಾರದೆ ಮರು ಗುತಿರ್ದಂ ಮನದಿ ಮುಂದೇನು ಹದನವೆಂದು.

ನಿಷಧಾಧಿಪನ ಮಹಾರಾಣಿ ತಾಂ ಮೂಡುಕಡೆ ಕೆಂಪಾಗೆ ಮಿಂದು ಮಡಿಯುಟ್ಟು ಮಾರಹರನರ್ಧಾಂಗಿಯಂ ಕಾಳಿಕಾನಿಲಯದೊಳ್ ಪೂಜಿಸುತೆ ಪ್ರಾಣೇಶ್ವರನ ಸೌಖ್ಯಮಂ ಬೇಡುತ್ತೆ ಶಿವನನಂತೆಯೇ ಭಕ್ತಿ ಯಿಂದರ್ಚಿಸುತೆ ದಿನಗಳಂ ಕಳೆಯುತಿರ್ದಳು ತನ್ನ ಸುವ್ರತದ ನಿಷ್ಠೆ ಯಿಂದೆ. ಉದ್ಯಾನವನ ವಿಹಾರಂಗಳಂ ಮೇಣ್ ಸಖೀಜನದ ಗೋಷ್ಠಿ

ಯಂ ಬಿಟ್ಟು ದಾಸಿಯರ ಸೇವೆಯಂ ಕೈಕೊಳ್ಳದೊಂದೂಟದೊಳ್ ಮಕ್ಕಳುಪಚಾರಮಂ ತಾನೆ ಕೈಕೊಂಡು ನಡೆಯುತ್ತೆ ಮಲಿನಾಂಬರದಿ ಮೈಯ್ಯಂ ಮುಚ್ಚಿ ತಪಸ್ವಿನಿಯರ ತೆರದಿಂದೆ ಪತಿದೇವನಂ ಮಾನಸದಿ ಪೂಜಿಸುತೆ ಮತ್ತಾರಿಗುಂ ಭಾರಮಾಗದೆ ತೌರಿನೊಳ್ ದಿನಗಳಂ ಕಳೆಯುತಿರ್ದಳು ಬಡತನದಿ ಬೇಯುತಿಹ ತನ್ನರಸನಂ ನೆನೆದುನೆನೆದು.

ಮುಂದೊಂದು ದಿನ ಭೀಷ್ಮಕಂ ಪರ್ಣಾದನೆಂಬೊರ್ವ ವಿಪ್ರನಂ ಕರೆದು ಧನವಿತ್ತು ಮನ್ನಿಸುತೆ ತನ್ನಳಿಯನನ್ನರಸಿಬಾಯೆಂದು ಪೇಳ್ದೊಡನೆ ಪಾರ್ವನಣಿಯಾಗಿ ಪೊರಡುತಿರಲಾ ವೈದರ್ಭೆ ತಾಂ ಪ್ರಾರ್ಥಿಸುತೆ ಭೂದೇವನಂ "ದೇಶದೇಶಂಗಳಂ ಸುತ್ತಿ ಸ್ವಸ್ತ್ರೀಯ ಸೆರಗ ಹರಿದವರುಂಟೆ ಲೋಕದೊಳ್ ಪೇಳ್ವುದೆಂದೆಲ್ಲರಂ ಕೇಳುತ್ತೆ ಮರುನುಡಿಯನಿತ್ತವರ ಪರಿಕಿಸುತೆ ಬರುವುದೆಂ"ದೊರೆದು ಕಾಲ್ವಿಡಿದು ಕಳಿಪಿದಳ್ ತನ್ನಾಸೆ ಫಲಿಸಲೆಂದಭವನಂ ಪಾಡಿ ಪೊಗಳಿ.

ವಸುಧೆಯಂ ಸುತ್ತಾಡಿ ಭೂಸುರಂ ವೈದರ್ಭೆಯಾದೇಶಮಂ ಸಾರುತುತ್ತರವನೇನಂ ಪಡೆಯದಾತಂ ಮುಂದೆ ನಡೆನಡೆದು ಮುಂದೆ ಸಾಕೇತಮಂ ಸೇರ್ದಲ್ಲಿ ಲೋಗರಂ ಬೆಸಗೊಳ್ಳುತಿರೆ ಬಾಹುಕಂ ಬಳಿಸಾರಿ "ಸ್ವಸ್ತ್ರೀಯ ಸೆರಗ ಹರಿದವರುಂಟು ಲೋಕದೊಳ್ ಜೂಜುಗಾರನನರಿಯೆಯಾ ನೀ"ನೆಂದು ನಿಟ್ಟುಸಿರ ಸೂಸುತ್ತೆ ಮಾರ್ನುಡಿಯನಿತ್ತಲ್ಲಿ ನಿಲ್ಲದೆಯೆ ನಡೆಯಲಾ ಪರ್ಣಾದ ತಾಂ ಬಂದೊರೆದನೀ ವಾರ್ತೆಯಂ ಮೇಣ್ ಬಾಹುಕನ ರೂಪಮಂ ಮತ್ತವನ ವೃತ್ತಿಯಂ ಭೀಷ್ಮಕನ ಮಗಳ ಮುಂದೆ. ನುಡಿಗೆ ಮರುನುಡಿಯು ಸಮ್ಮತಮಾಗಿ ನುಡಿದವಂ ನಿಷಧಾಧಿಪಂ ದಿಟಮೆಂದು ನಂಬಲೇಂ ರೂಪಸಾದೃಶ್ಯಮಿನ್ನಲ್ಲಿ? ನಳನಹುದೆ? ಮೇಣಲ್ಲವೇ? ಪೇಳ್ವರದಾರೆಂದು ಯೋಚಿಸುತೆ ಪರ್ಣಾದನಂ ಮನ್ನಿಸುತೆ ಬಗೆಬಗೆಯೊಳಾ ಬಾಹುಕನ ವಿಷಯಮಂ ಕೇಳಿ ಪರಿಕಿಸುತೆ ನಿರ್ಧಾರವಿಲ್ಲದೆ ಮನದಿ ತರಹರಿಸಿ ತಾಂ ಚಿಂತೆಯೊಳ್ ಮುಳುಗಿದಳ್ ಮುಂದೇನು ಯತ್ನಮೆಂದು. ಅನ್ನಪಾನಂಗಳೊಂದುಂ ಬೇಡವಾದುದು ಮನಕೆ, ನಿದ್ರೆ ಬಾರದು ಕಣ್ಗೆ, ಕಾಯದೊಳ್ ಕಂದಿಪೋದುದು ಕಾಂತಿ, ಕಾಣಲಾರದೆ ಪತಿಯನಾ ದುಃಖಾಗ್ನಿ ಬೇಯಿಸಿತು ಹೃದಯಮಂ, ಕಳೆಗುಂದಿತಾನನಂ, ಕೃಶಮಾದಳಯ್ಯೊ ಸುದತಿತಾಂ ತನ್ನವ್ವೆ ಆರೈಕೆಯಂ ಗೈಯ್ಯುತಿರಲು.

ಸಾಕೇತದೊಳ್ ನಳನೃಪಂ ಕುದುರೆಗಳ ಲಾಯದೊಳ್ ರಾತ್ರಿ ಪವಡಿಸುತೆ ನಿದ್ರೆ ಇಲ್ಲದೆ ದಿನದಿನಂ ವೈದರ್ಭಿಯಂ ನೆನೆದು ವೈವಾಹದೊಳ್ ಸತಿಯಾಗಿ ಮತ್ತೆನ್ನ ಸಂಸಾರದೊಳ್ ಸಖಿಯಾದ ಸುಖದುಃಖದೊಳ್ ಜತೆಯಾಗಿ ಬಿಡದೆನ್ನನೇ ನಂಬಿ ಬಂದಿರ್ದಳಂ ಭಗ್ನಮಂದಿರದಿ ಹುಡಿಧೂಳಿನೊಳ್ ಬಲು ಹಸಿದು ಬಾಯಾರಿ ಮತ್ತೆನ್ನ ಜತೆಯಿಂದೆ ಬಿದ್ದೊರಗಿ ನಿದ್ರೆಯಂ ಗೈದಿರ್ದಳಂ ಮೇಣೆನ್ನ ಪ್ರೇಮ ಸರ್ವಸ್ವಮಂ ನಟ್ಟಡವಿಯೊಳ್ ನಿರ್ದಯದಿ ಸೆರಗಹರಿದುಟ್ಟು ಕೈಬಿಟ್ಟು ಬಿಟ್ಟು ಬಂದೆನಾಂ. ಭಾಗ್ಯಹತನಾದೆನ್ನನುಂ ನೆನವಳೇ ನನ್ನಾಕೆ? ಬಲ್ಲೆನಾಂ ಮರುಗುವಳ್ ನನಗಾಗಿ, ಕಣ್ಣೀರ ಸುರಿಸುವಳ್ ಮತ್ತೆನ್ನ ದೆಸೆಯಿಂದೆ ಕೊರಗುವಳ್. ಬಳಲಿ ಬೆಂಡಾಗಿ ಭಾಗ್ಯನಿಧಿ ದಮಯಂತಿ ತಾಂ ಎಲ್ಲಿಹಳೋ! ಮತ್ತಾರ ಮನೆಯೊಳಗೆಲ್ಲಿ ಪರನಿಕಾಯದೊಳ್ ಸೇವೆಯಂ ಗೈಯುತ್ತ ನಿಂದಿಹಳೋ! ಹಾ! ಎನ್ನ ವಿಧಿಯೇ ಹಾ! ಎಂದು ಹಮ್ಮೈಸಿ ತೊಳಲುತಿರ್ದಂ. ಹೃದಯದೊಳ್ ಕೀಲಿಸಿದ ಕುಂತದಿಂ ಬಿದ್ದಿರ್ದ ಯೋಧ ತಾಂ ನರಳುವಂತೆ ಉದಯದೊಳಗೇಳುತ್ತೆ ನಿತ್ಯಕರ್ಮಂಗಳಂ ತೀರಿಸುತೆ ಋತುಪರ್ಣನಿತ್ತಿರ್ದ ಕೆಲಸಮಂ ನಿಷ್ಠೆಯಿಂ ನಡೆಸುತ್ತೆ ಪಗಲನೆಂತೋ ದೂಡುತಿರ್ದಂ. ರಾತ್ರಿಯೊಳ್ ತನ್ನರಸಿಯಂ ಬಾಳಕಿರುಸೊಡರ ಸುಸ್ನೇಹಮಯ ಸುದತಿಯಂ, ನೆನೆನೆನೆದು ಕೊರಗಿಕರಗುತ್ತೆ ಭೂವರೇಣ್ಯಂ ಮನದಳಲ ಪರಿಹಾರಮಾರ್ಗಮಂ ಕಾಣದೆಯೆ ದಿನದಿನಕೆ ಕೃಷ್ಣಪಕ್ಷದ ಚಂದ್ರನೊಲ್ ಕ್ಷೀಣತೆಯಗೊಂಡಿರ್ದನಾ ಬಡವ ತಾಂ ಮಹಾರೋಗದೊಳ್ ನವೆವ ತೆರದಿ.

ಪರ್ಣಾದನಾಡಿರ್ದ ಮಾತುಗಳ ಕೇಳ್ದಂದು ಮನದೊಳೇನೇನೋ ಯೋಚಿಸುತೆ ಮತ್ತುಮತ್ತದನೆ ಚಿಂತಿಸುತೆ ನುಡಿಯನಡಿಗಡಿಗೆ ತಾನೆ ನುಡಿನುಡಿದು ನಳನೃಪಂ ನುಡಿಯಲಗು ಹೃದಯಮಂ ಭೇದಿಸಲ್ ತನ್ನೆದೆಯ ಬಡಿಬಡಿದು ರೋದಿಸುತೆ ಹಯದ ಲಾಯದೊಳ್ ರಾತ್ರಿ ಬಿಕ್ಕಳಿಸಿ ಬಾಯ್ಬಿಟ್ಟು ಮಡದಿಯಂ ಕರೆಕರೆದು ನೆಲದ ಮೇಲುರುಳಿ ಬೀಳುತ್ತೆ ಮೇಲೆದ್ದು ನಿಲ್ಲಲಾರದೆ ಮತ್ತೆ ತುರಗಂಗಳಂ ಬಳಿಸಾರಿ ಕೊರಳ ಬಿಗಿದಪ್ಪಿ ಶಿರವ ಮುಂಡಾಡಿ ಮೈಯಂ ಸವರಿ ಮೇವಿತ್ತು ಮನವನಾ ಕೆಲಸದೊಳ್

ದೊಡುತ್ತೆ ದುಃಖಮುಂ ಕಳೆಯುತಿರೆ ವಾಜಿಗಳ್ ಸಂಪ್ರೀತಿಯಿಂ ಬಿಡದವನ ವೈ ಕೈಗಳೆಲ್ಲಮುಂ ನೆಕ್ಕಿ ಬಾಲದೊಳ್ ಬೀಸುತ್ತೆ ಹರ್ಷಮಂ ಬೀರುತಿರ ಲನಿತರೊಳ್ ಶೋಕತಮಮಾರಿತೆನೆ ಮುಂಬೆಳಗು ಬಿದ್ದಿರ್ದುದು.

ಭೂಸುರನ ಬಾಯಿಂದೆ ಬಂದಿರ್ದ ಕೌತುಕದ ಮಾತಿನೊಳ್ ಹುದುಗಿರ್ದ ಸೂಕ್ಷ್ಮತೆಯ ಭಾವಮಂ ಪರಿಗಣಿಸಿ ನಿಷಧಾಧಿಪಂ ತನ್ನರಸಿ ತನಗಾಗಿ ಕಳುಹಿರ್ದ ಬೇಹಿನಾ ಸೊಲ್ಲೆಂದು ತಿಳಿಯುತ್ತೆ ತನ್ನಾಕೆ ದಮಯಂತಿ ಯೆಂತಾದೊಡಂ ಕುಂಡಿನಾಪುರಕೆ ನಡೆಯುತ್ತೆ ತನ್ನ ತಾಯ್ಮನೆಯ ಸೇರಿರ್ಪುದೇ ದಿಟಮೆಂದು ನಿರ್ಧರಿಸಿ ನೆಮ್ಮದಿಯನಾಂತಿರ್ದನು.

ಪರ್ಣಾದನೊಳ್ ಬಾಹುಕಂ ಪೇಳಿರ್ದ ಮರು ನುಡಿಯನೇ ನೆನೆ ನೆನೆದು ಚಿಂತಿಸುತೆ ದಮಯಂತಿ ತಾಂ ಕೊನೆಗದೇ ಬೇಹಿನುತ್ತರದಿ ನೃಪವರೇಣ್ಯನ ಹೊಲಬನವಲೋಕಿಸುತೆ ತನ್ನವ್ವೆಯೊಳ್ ಮಾತಾಡಿ ನಂಬಿದರ ಸುಖಕಲ್ಪಭೂಜನಂ ಪರಮೇಶನಂ ಪೂಜಿಸುತೆ ಶಿವಶಕ್ತಿ ರೂಪದೊಳ್ ಭೂದಿವಿಜ ದಂಪತಿಗಳಂ ಕರೆದು ಬಾಗಿನವನಿತ್ತವರ ಮನ್ನಿಸುತೆ ಮಂಗಲಾಶೀರ್ವಾದವಂ ಪಡೆದು ಭೂಸುರನನಾ ಸುದೇವನಂ ಕರೆಸುತ್ತೆ ಕಾಣಿಕೆ ಯನಿತ್ತವನ ಕಾಲ್ಪಿಡಿದು ಗುಟ್ಟಿನೊಳ್ ಕಿವಿಯೊಳೇನನೋ ನುಡಿದು ಪತ್ರಿಕೆಯ ಬರೆದಿತ್ತು ಪ್ರಾರ್ಥಿಸುತೆ ಕಳುಹಿದಳ್ ಕೋಸಲದ ರಾಜ್ಯದೆಡೆಗೆ.

ವರ್ಣೋತ್ತಮಂ ನಡೆನಡೆದು ಸಾಕೇತಮಂ ಸೇರ್ದೊಡನೆ ಋತುಪರ್ಣನಾಸ್ಥಾನಮಂ ಪೊಕ್ಕು ಶುಭಾಶಯವ ಕೋರಿರ್ದನನಿತರೊಳ್ ಭೂಭುಜಂ. ಸ್ವಾಗತವನಿತ್ತವನ ಕುಳ್ಳಿರಿಸಿ ಮನ್ನಿಸುತೆ ಬಂದ ಹದನೇನೆಂದು ಬೆಸಗೊಳಲ್, ಭೂಸುರಂ "ಕುಂಡಿನಾಪುರದರಸು ಭೀಷ್ಮಕಂ ಕೈಯ್ಯಾರೆ ನಿನ್ನೆಡೆಗೆ ಕಳುಹಿರ್ಪನೀ ಕಾಣಿಕೆಯನೀ ಲಿಖಿತಮಂ ಕೊಳ್ಳೆಂ"ದು ಪ್ರಾರ್ಥಿಸುತೆ ತಂದಖಿಳದ್ರವ್ಯಂಗಳಂ ನೃಪನ ಮುಂದಿಟ್ಟು ಹರಸುತ್ತೆ ಮತ್ತೆಲ್ಲರಾಪತ್ರಿಕೆಯ ಭಾವಮಂ ತಿಳಿವ ಕೌತೂಹಲದಿ ಕತ್ತೆತ್ತಿ ರಾಜೇಂದ್ರನಂ ನೋಡುತಿರಲಿತ್ತಲೀ ಪಾರ್ವಂ ತಾಂ ಕಾಲ್ತೆಗೆಯುತಲ್ಲಿಂದೆ ಜತನದೊಳ್ ಕಾಣದಾದಂ.

ಅವನೀಶನಾಣತಿಯ ತೆರದಿಂದೆ ಕರಣಿಕಂ ಲಿಖಿತಮಂ ಕೈಕೊಂಡು ತನ್ನಾಳ್ದನಂ ವಂದಿಸುತೆ ಬಿಚ್ಚುತೋದುತೆ ಓಲೆಯಂ ತಾಳುತಚ್ಚರಿ

ಯೊಳಾ ಪತ್ರಿಕೆಯ ವಿವರಮಂ ವಾಚಿಸಿದನಾಸ್ಥಾನದೊಳ್ ಸಭಿಕರಾಡೆಲ್ಲರುಂ ಬೆರಗಿನಿಂ ಕೇಳುತಿರಲು.

'ಸ್ವಸ್ತಿ! ಶ್ರೀಮದ್ರಾಜರಾಜೇಂದ್ರಸಕಲಸದ್ಗುಣಸಾಂದ್ರ ಪರಿಶುದ್ಧಚಾರಿತ್ರ್ಯ ಸಾಕೇತಜನನಾಥಋತುಪರ್ಣಭೂವರೇಣ್ಯಂ ಪಾಲಿಸುವ ಮನುಕುಲದ ಸದ್ಧರ್ಮಸಾರಮಂ ನಂಬಿ ಕೆಳೆಗೊಂಡ ಕುಂಡಿನೀಪುರದೊಡೆಯನಾ ಸತ್ಯನಿಧಿ ಭೀಷ್ಮಕಂ ಬರೆಸಿರ್ದ ಬಿನ್ನಪವಿಸು.

ನಮ್ಮಣುಗಿ ದಮಯಂತಿಯಂ ಪರಿಣಯದಿ ಕೈಪಿಡಿದು ವರಿಸಿರ್ದ ನಿಷಧೇಶ್ವರಂ ದ್ಯೂತದೊಳ್ ತನ್ನ ಸಾಮ್ರಾಜ್ಯಸಂಪದವನೆಲ್ಲಮಂ ಕಳೆದೊಗೆದು ಕಾಡಿನೊಳ್ ತನ್ನರಸಿಯಂ ಕೈಬಿಟ್ಟು ತಾಂ ನಡೆದಿರಲ್ ಮತ್ತವನನರಸುತ್ತೆ ಮೇಣೆಲ್ಲಿಯುಂ ಕಾಣದಿರೆ ದಮಯಂತಿ ತಾಂ ಪುನಃ ಸ್ವಯಂವರದ ಮುಖದಿಂದೆ ತನ್ನರಸನಂ ಪೊಂದಿ ಬಾಳ್ವಂತೆ ನಿರ್ಧಾರಮಂಗೈದಿದೇಮುಂದೆ ಬಹ ಪ್ರತಿಪದೆಯ ದಿನದಂದು ಶುಭಲಗ್ನದೊಳ್ ನಿರ್ಣಯಂಗೊಂಡಿರುವ ಮಂಗಲೋತ್ಸವಕೆ ಪರಿವಾರ ಸಹಿತೈತಂದು ವೈವಾಹಮಂ ಪೂರೈಸಿ ನಮ್ಮ ಮನದಾನಂದಮಂ ಬೆಳಗಿಪುದು ಸಂಪ್ರೀತಿಯಿಂದೆ.'

ಕೇಳ್ದೊಡನೆ ಕೌತುಕದಿ ಸಭಿಕರಂ ಮೊಗನೋಡಿ ಭೂಮೀಶ್ವರಂ "ಏನಿದೇನನ್ಯಾಯಮಿಾ ಧಾತ್ರಿಯೊಳು. ನಳನೃಪಂ ಕೈಬಿಟ್ಟನೇ ತನ್ನಾಕೆಯಂ! ದಮಯಂತಿ ತಾಂ ಮತ್ತೊರ್ಮೆ ವಧುವಹಳೇ? ಬೇರೋರ್ವನಂ ಪೊರ್ದುವಳೆ? ಛೀ ಭೀಷ್ಮಕಂ ಬರೆಸಿದನೆ ಪತ್ರಿಕೆಯನಾ ಬುಧಜನರ್ ಮೆಚ್ಚದರೆ ಅಕಟಕಟಧರ್ಮಮಂ ತೊರೆದರೇ ಪಾಪಿಗಳ್ ಪಾಶವಿಕವೃತ್ತಿಯಂ ಕೈಗೊಂಡರೇ? ದಸ್ಯುಗಳ್ ಕಾಮುಕ್ಕೆ ಕೈನೀಡಿ ಸ್ವರ್ಗೀಯ ಪ್ರೇಮಮಂ ಕೊಲೆಗೈದು ಮನುಕುಲದ ಧರ್ಮಮಂ ತುಳಿತುಳಿದು ಮಾನವರ ಪಾರಲೌಕಿಕನಿಷ್ಠೆಯಂ ಪರಿಶುದ್ಧಮಾಗಿರ್ದ ಸತಿತನದ ಸುವ್ರತದ ತತ್ವಮಂ ಮೇಣೆಮ್ಮ ಕ್ಷಾತ್ರಕುಲ ಗೌರವವನುಂ ಕಳೆದೊಗೆದು ನೀಚರೊಲ್ ಪರುಟವಿಸಿ ವೈವಾಹಮಂಗೊಂಡಿರ್ದ ರಮಣಿಯಂ ಕರೆತಂದು ಕಟ್ಟಿರ್ದ ಮಾಂಗಲ್ಯಮಂ ಹರಿದೊಗೆದು ಮದುವೆಯಂ ನಿರ್ಣೈಸಿ ಬೇರೊಂದ ಕಟ್ಟಿಸಲ್ ತೊಡಗಿದರೆ ಕುತ್ಸಿತರ್! ಹರ!

ಹರಾ! ಸುದತಿಯಂ ಕೈಯೆತ್ತಿ ಕೊಡುವವನದಾರ್ ಮೇಣ್ ಪರವಧುವ ನಾ ಮಂಗಲೋತ್ಸವದಿ ಕೈವಿಡಿದು ವರಿಸಿಕೊಂಬವನದಾರ್! ಮತ್ತನ್ಯ ಪುರುಷನಂ ಮೆಚ್ಚಿ ಮದುವೆಯೊಳ್ ಮಾಲೆಯನ್ನಿಕ್ಕುವದಾರ್! ಸತ್ಯ ಮಿಲ್ಲವೆ ಲೋಕದೊಳ್? ಶಿವಶಿವಾ ಹಾಳಾದುದೆಮ್ಮ ಬಾಹುಜರ ಕುಲ ಕೀರ್ತಿ ಮತ್ತೆಮ್ಮ ಹಿರಿಯರಾಳಿದ ನೆಲನ ಸತ್ಯಶಕ್ತಿ. ಧರ್ಮವಂ ಬಿಡ ದೊಂದೆ ನಿಷ್ಠೆಯೊಳ್ ಪಾಲಿಸಿದೊಡಾ ಧರ್ಮತಾಂ ಬಿಡದೆಮ್ಮ ರಕ್ಷಿಪುದು. ಮತ್ತಿದರ ಮರ್ಮವಂ ತಿಳಿಯದಾ ಧೂರ್ತರೀ ಕೃತ್ಯಕ್ಕೆ ಕೈತೊಡಗಿರಲ್ ತಾಳ್ವುದೆಂತೀ ವಾರ್ತೆಯಂ ಕೇಳಿ? ಮುಂದೆ ಧರ್ಮವಿದ್ರೋಹಕರ ಮೇಣ ವರ ಪ್ರೇರಕರನೆಲ್ಲರಂ ತಲೆಗಡಿದು ಮತ್ತವರ ನೆತ್ತರೊಳ್ ಕೈತೊಳೆದು ಸದ್ಧರ್ಮವಂ ಬೆಳಗಿಸದೆ ಪಿಂದುಳಿದೊಡಾಂ ಮನುಕುಲದ ನೃಪನಹೆನೆ? ಮಾನವನೆ? ನೋಳ್ಪೆನೆಂದವಂ ಕಾರ್ಯದೊಳ್ ಗುಡುಗುಡಿಸಿ ಪಲ್ಗ ಡಿಯೆ ಕರಣಿಕಂ ಕೈಮುಗಿದು "ಪರಿಣಯಕೆ ನಾಳೆಯೊಂದೇ ದಿನಂ ಮತ್ತುಳಿದು ಕಾದಿರ್ಪುದೆ"ಂದಂ.

ಅನ್ನೆಗಂ ಕೋಸಲೇಶಂ ರಾಹುತರ ನಾಲ್ದಿನದ ಪಯಣವಂ ಕ್ರಮಿ ಸುತ್ತೆ ಪರಿಣಯಕೆ ಮುಂದಾಗಿ ಕುಂಡಿನಾಪುರವ ತಾಂ ಸೇರ್ದಲ್ಲಿ ನಿರ್ಣ ಯಂಗೊಂಡಿರ್ದ ಧರ್ಮಬಾಹಿರವಾದ ವೈವಾಹವಂ ಮತ್ತೆಂತು ತಡೆದ ಪುದು ತಾನೆಂದು ಯೋಚಿಸುತಲಡಿಗಡಿಗೆ ಕೂಡಿರ್ದ ತನ್ನವರನೆಲ್ಲರೊಳ್ ಮಾತಾಡಿ ಮುಂದೇನು ಗತಿಯೆಂದು ದುಮ್ಮಾನದಿಂ ತರಹರಿಸಿ ಧರ್ಮ ರಕ್ಷಣೆಗಾಗಿ ಚಡಪಡಿಸುತಿರ್ದಂ, ಮತ್ತುಮತ್ತದನೆ ಗೊಣಗುತ್ತೆ ಕಾಲವಂ ನೆನೆದು ನೆನೆದು.

ಅನಿತರೊಳ್ ಪತ್ರಿಕೆಯ ತಂದವನ ಬಾಯಿಂದೆ ವಿವರಮಂ ಬೆಸ ಗೊಂಡು! ನೋಳ್ಪದೆಂದೆಲ್ಲರೊಮ್ಮತದಿಂದೆ ತಮ್ಮಾಳ್ದನಂ ಪ್ರಾರ್ಥಿಸಲ್ ದಿಟಮೆಂದು ತಲೆದೂಗಿ ಸಾಕೇತನಾಥಂ ವಿಪ್ರನಂ ಕಾಣದಿರೆ ವಿಸ್ಮಯಂ ಗೊಂಡು ಶೀಘ್ರದೊಳ್ ಪಾರ್ವನನ್ನರಸಿ ತಹುದೆಂದೊರೆದು ಮತ್ತಿರದೆ ಯೋಚಿಸುತಲಿರ್ದಂ ಪತ್ರಿಕೆಯ ವಿವರಮಂ ಮೇಣದಂ ತಂದಿತ್ತ ಭೂ ಸುರನ ವರ್ತನಮಂ.

ಜನನಾಥನಾಸ್ಥಾನದೊಳ್ ತುಂಬಿರ್ದ ಸೋಜಿಗದ ಸುದ್ದಿ ತಾಂ

ಗುಜುಗುಜಿಸಿ ನಗರದೊಳ್ ಹರಡುತಿರೆ, ವಿಪ್ರನನ್ನರಸುತ್ತೆ ನಡೆವವರ್ ಮತ್ತದರ ವಿವರಮನ್ನೊರೆಯುತ್ತೆ ಸುತ್ತುತಿರೆ ಸಾಕೇತದರಮನೆಯ ಸೇವಕರ ಮೊದಲಿಗಂ ಮತ್ತೊಮ್ಮೆ ಬಾಹುಕನ ಬಹುದಿನದ ಕೆಳೆಯನಾ ಜೀವಲಂ ಬಂದೊರೆದನೀ ವಾರ್ತೆಯಂ ಮೇಣದರ ವಿವರಮಂ ಬಾಹುಕಂ ಭಯಚಕಿತ ಭಾವದಿಂ ಕೇಳುತಿರಲು.

ಕೇಳಿದಂ ಬಾಹುಕಂ ಕಳವಳದಿ ಮತ್ತೊಂದ್ಸೆಂದೆ ವಿವರಮಂ ಪೇಳುತಿರೆ ಜೀವಲಂ ನುರಣಮುಖನಾಗಿರ್ದ ಪತಿದೇವನಂ ನೋಡನೋಡುತೆ ಸತಿಯು ಹೃದಯೇಶ್ವರಂ ಕೊನೆಯುಸಿರನೆಳವನಿತರೊಳ್ ಮೂರ್ಛೆಗೊಂಡಂತೆ ಬಾಹುಕಂ ನಳನರಸಿಯಂ ಪುನಃ ಸ್ವಯಂವರದ ಮುಖದಿಂದೆ ಪರಿಣಯಂಗೊಳಿಪರೆಂಬುದಂ ಕೇಳ್ದೊಡನೆ ದೊಪ್ಪೆಂದು ಬಿದ್ದಿರ್ದನಾ ಬಳಲಿರ್ದ ತೇಜಿ ತಾಂ ಕೆಡೆವಿರ್ದ ತೆರದಿ.

ಬಿದ್ದಿರ್ದ ಗೆಳೆಯನಂ ಪಿಡಿದೆತ್ತಿ ಕುಳ್ಳಿರಿಸಿ ಮೈಮುಡಿಗಳೊಳ್ ಮೆತ್ತಿಕೊಂಡಿರ್ದ ಧೂಳಂ ಕೊಡಹಿ ಮುಂದಲೆಯ ಘಾಯದಿಂ ಚಿಮ್ಮುತಿಹ ರಕ್ತಮಂ ನೋಡುತ್ತೆ ಜೀವಲಂ ಭೀತಿಗೊಂಡಾಕ್ಷಣದಿ ಪಾಯ್ದೋಡಿದಂ ಮದ್ದಿನಾ ಮೂಲಿಕೆಯನರಸಿತರಲು.

ಕ್ರೂರ ವಾರ್ತೆಯ ಖಡುಗಹತಿಯಿಂ ಭೂಮಿಯೊಳ್ ಬಿದ್ದಿರ್ದ ಭೂವರೇಣ್ಯಂ ಕೆಳೆಯನೊತ್ತಾಸೆಯೊಳ್ ಮೇಲೆದ್ದು ಕುಳ್ಳಿರ್ದೊಡೇಂ. ಬಡಬನುರಿಯಿಂದೆ ಜಡಧಿತಾಂ ಕುದಿಕುದಿದು ಸುಯ್ವಂತೆ ಮೇಲ್‌ಶ್ವಾಸ ಮುಕ್ಕುತಿರೆ ಕೊರಕೊರಗಿ ಕುಳಿಬಿದ್ದ ಕಣ್ಣಾಲಿಗಳ್ ನೆಟ್ಟು ನರನರಂಗಳು ಸೇದುತಿರೆ ಹೃದಯದುಮ್ಮಳದಿಂದೆ ದುಃಖಾಶ್ರು ತಡೆಯಿಲ್ಲದೋರಂತೆ ಕಣ್ಣಿನೊಳ್ ಸುರಿಯುತಿರೆ ಸಹಿಸಲಾರದೆ ವೇದನೆಯನಾ ನೃಪವರಂ ಮತ್ತುಮತ್ತಡಿಗಡಿಗೆ ಕೈಯಿಂದೆ ತನ್ನೆದೆಯ ತಾಂ ಬಡಿಯುತಿರ್ದಂ, ಕೇಳ್ದೊಡನೆ ಹೃದಯಮಂ ಬಡಿದಿರ್ದ ಕುಲಿಶಹತಿಯಂ ಪೋಲ್ದ ಸರ್ವನಾಶದ ವಾರ್ತೆಯಂತೆ.

ಪರಿಭವದಿ ಕರಗಿ ನೀರಾಗಿ ವಿರಹದುರಿಯಿಂದೆ ತಪ್ತನಾಗಿರ್ದ ಭೂಲಲಾಮನ ಮನಂ ಮತ್ತವನ ಹೃದಯಮಂ ಬೇಯಿಸಿರೆ ಮೊದಲೊಳೇ ಬೆಂದು ನೊಂದಿರ್ದ ಹೃದಯಂತಾಂ ತಾಳ್ವುದೇ? ತನ್ನಾಕೆಯಂ ವಿಧಿ

ವಿಧಾನದೊಳಂದು ತಾಂ ನೇಹದೊಳ್ ಕೈವಿಡಿದು ವರಿಸಿರ್ದ ಮಡದಿಯಂ ಸೌಭಾಗ್ಯ ಜೀವನದಿ ದಾಂಪತ್ಯಮಂ ಸಾಗಿಸುತೆ ಮತ್ತದರ ದ್ಯೋತಕಂ ಬೆತ್ತು ಮಕ್ಕಳಂ ಪಡೆದಿರ್ದ ನೆಚ್ಚಿನಾ ನಿಜರಮಣಿಯಂ ಬೇರೊರ್ವನಿಂಗಿತ್ತು—ಅಲ್ತಲ್ತು ಮತ್ತಾಕೆಯೇ ಪರಕೀಯನೋರ್ವನಂ ಮೆಚ್ಚಿವರಿಸುತ್ತೆ ಮರುಮದುವೆಯೊಳ್ ಸೆರಗ ಪಿಡಿದಪಳೆಂದು ಬಂದಿರ್ದ ಪತ್ರಿಕೆಯ ವಾರ್ತೆಯಂ ಕೇಳ್ದುದುಂದೆ.

ಹೊರಗೊಳಗೆ ಬಡಿದಿರ್ದ ಹೊಡೆತಂಗಳಿಂ ಹೃದಯತಾಂ ಹದಗೆಡಲ್ ಬಾಹುಕಂ ಹೆಡೆತುಳಿದ ನಾಗನೊಲ್ ಬುಸುಗುಟ್ಟಿ ಗರಳಮಂ ಕಾರಿರ್ದ ತೆರದಿಂದೆ ನೀರೆಯಂ ನಿಂದಿಸುತೆ ಹದಿಬದೆಯ ಧರ್ಮಮಂ ಕಳೆದೊಗೆದಳೆಂದೊಳಗೊಳಗೆ ಶಪಿಸುತ್ತೆ, ಛೀಗಳೆದು, ಚಂದ್ರವಂಶದ ಕೀರ್ತಿತಾಂ ಮಸುಳಿಸಿತೆ ಹಾಯೆಂದು ತನ್ನ ತಾಂ ದೂರುತ್ತೆ ಮುನ್ನ ತಾಂ ಗೈದುದಂ ನೆನೆನೆನೆದು ತನ್ನಾಕೆಯೊಳ್ ತಪ್ಪಿದೆಂ ತಾನೆನ್ನ ಸತಿಗೆ ತಾಂ ಧರ್ಮದೊಳ್ ವಂಚಿಸಿದೆ ಶಿವಶಿವಾಯೆಂದೊರಲಿ ಜನಪ ತಾಂ ಮರುಗುತಿರ್ದಂ ಕಯ್ಯಾರೆ ಕಟುಕಂಗೆ ಕರೆದಿತ್ತ ಧೇನುವಂ ಸ್ಮರಿಸುತ್ತೆ ಹಲುಬಿದೊಲ್ ಮಡದಿಯಂ ನೆನೆದು ಮನದಿ.

"ಹಾ ಎನ್ನಮನದನ್ನೆ ರೂಪಗುಣಸಂಪನ್ನೆ! ಮೇಣೆನ್ನ ಸಂತಸದ ಸೌಭಾಗ್ಯರನ್ನೆ! ಎಲ್ಲಿರ್ಪೆ ಪೇಳೆನ್ನ ನಲ್ಲೆನೀಂ ನಿನ್ನನಾಂ ಕಗ್ಗಾಡಿನೊಳ್ ಕೈಬಿಟ್ಟು ನಿನ್ನುಡೆಯ ಹರಿದುಟ್ಟು ವಂಚಿಸುತೆ ಗುರುತರದ ದ್ರೋಹಮಂ ಗೈದುದಕೆ ಸಿಟ್ಟಾದೆಯಾ? ನಿನ್ನಾಣ್ಮನಂ ಮರೆದೆಯಾ? ಪ್ರಾಣೇಶ್ವರಿಯೆ ಪೇಳೆನಗೆ ನೀಂ ಮರುಮದುವೆಯೊಳ್ ಮುಯ್ಯಾಂಪೆಯಾ? ಭಾಗ್ಯಹೀನಂ ಗೈದಿರ್ದ ತಪ್ಪಿತಕೆ ಮತ್ತಿದೇಂ ಶಿಕ್ಷೆಯೇ? ಪಕ್ಷಿಗಳ್ ವಸನಮಂ ಕೊಂಡೊಯ್ಯೆ ನಿಜಸೆರಗನೊಲಿದಿತ್ತು ನಿನ್ನವನ ಮಾನವಂ ರಕ್ಷಿಸಿದೆ ದೇವಿ! ನಿರ್ದಯಂ ನಾನಲ್ಲ, ದುರ್ದೆಸೆಯ ಪರಿಭವದಿ ದೂಡುತ್ತೆ ಮತ್ತದರ ಭಾರಮಂ ಬಾಳಿನೊಳ್ ಹೇರುತ್ತೆ ನಿನ್ನನಾಂ ಕೂಡುತ್ತೆ ಮುಂದಡಿಯನಿಡಲಾರದಡಿಗಡಿಗೆ ಯೋಚಿಸುತೆ ನಿದ್ರೆಯಿಂ ಮಲಗಿರ್ದ ನಿನ್ನಂ ಪುಣ್ಯಫಲವನೆ ಬಿಸುಟು ನಡೆದಿರ್ದ ಪಾಪಿಯೊಲ್ ಜುಣುಗಿರ್ದ ನನ್ನಿಂದ ನಿನ್ನ ಕಷ್ಟತಾಂ ಪೆರ್ಚದಿರಲೆಂದು ಬಗೆದು. ನನ್ನೆ

ಣಿಕೆ ತಪ್ಪಾಗಿ ಸುದತಿ ನೀಂ ಮತ್ತೇನು ಪರಿಭವಕೆ ತುತ್ತಾದೆಯೋ? ಮತ್ತಾರ ಮನೆಯೊಳಗೆ ತೊತ್ತಾದೆಯೋ? ನಳನರಸಿ ನೀಂ ಹೆತ್ತವರ ಸೇರುತ್ತೆ ನನಗಾಗಿ ಬೇಸತ್ತು ಮುನಿದುನೀಂ ಸುತ್ತಿರ್ದ ವೈವಾಹ ಬಂಧನವ ಬರಿಗೈದೆಯಾ? ಹೆತ್ತವರ್ ಸಮ್ಮತಿಯನಿತ್ತಿಹರೇ? ದಮಯಂತಿ ಬಾಂಧವರ್ ಮೆಚ್ಚಿದರೆ? ವಿಪ್ರರಾಶೀರ್ವಾದವಂ ಕೊಟ್ಟಪರೆ? ಕಾಂತೆ ಮಕ್ಕಳಿರ್ವರು ತಿಳಿವರೇ ತಾವ್ ತಮ್ಮ ಜನನಿಯುಂ ಮತ್ತೊರ್ವರ್ಗೆ ಹಂದರದಿ ವಧುವಾಗಿ ನಿಲ್ಲಿಪುದ? ಮೇಣವರ ಜನಕನಂ ಜೀವಜೀವದಿ ಕೊಲ್ವುದೇ? ಮನಬಂದುದೇ ಪ್ರಿಯತಮೆ ನಿನ್ನರಸನಂ ಚಿರಕಾಲ ತೊರೆವುದಕೆ ಪೂರ್ವಜನ್ಮದ ಕರ್ಮಫಲದಿಂದೆ. ಸತಿಪತಿಯರೆಂದೆನಿಸಿ ಬಾಳಿದೆವು ಬಾಳಿನಾ ಸವಿಯ ಸವಿಸವಿದು ಸೌಖ್ಯದಾ ಸ್ವರ್ಗವಂ ಭೂಮಿಯೊಳ್ ಭೋಗಿಸುತೆ ವಿಧಿಯ ಕ್ರೌರ್ಯಕೆ ಸಂದು ಭೋಗಭಾಗ್ಯಂಗಳೆಲ್ಲವಂ ತೊರೆದು ಬಡತನದಿ ಕಾಡಂ ಕೂಡಿದೊರ್ಡಂ ಒಲಿದೆದೆಯ ಪ್ರೇಮದೊಳ್ ಬಡತನಂ ಕಂಡಿರ್ದುದೇ? ಕಡವರಂ ಕಪ್ಪಾದೊಡೇಂ? ಕಬ್ಬುನಂ ತಾನಪ್ಪುದೇ? ಪತಿಪತ್ನಿಯರ ಪ್ರೇಮಮೇನ್ ಕ್ಷಣಿಕವಾಗಿರ್ಪುದೆ? ಪೇಳೆನ್ನ ಚೆನ್ನೆ! ದಿಟವಿದೇಂ! ಕಡೆಗು ನೀಂ ಕೈಬಿಡುವೆಯಾ? ನಿನ್ನವನ ನೀ ಭಾಗ್ಯಹೀನನ ನಳನ ನಿನಗಾಗೆಯಿನ್ನುಂ ಜೀವಿಸುವ ಹೆಣನ ಹಾ! ಹಾ! ಎನ್ನ ವಿಧಿಯೇ! ಪ್ರಾಣೇಶ್ವರಿ ದಿವಿಜೇಂದ್ರನಪ್ಪಣೆಯ ಪಾಲಿಸುತೆ ಮೊದಲೊಳಾಂ ನಿನ್ನ ಕಂಡಂದು ದಿಕ್ಪಾಲರಂ ನೀ ಕರೆಸಿ ನಳನೃಪನೆ ನಲ್ಲನೆಂದೊರೆದಿರ್ದೆ ಕಾಂತೆ ಎನ್ನನೀಂ ನೋಡದೆಯೆ ಪ್ರೀತಿಸುತ್ತೆ! ಎಲ್ಲಿರ್ಪುದಾನಿನ್ನ ಪರಿಶುದ್ಧದಾತ್ಮಂ? ನಿರ್ವ್ಯಾಜ ಪ್ರೇಮಂ? ದಯೆದೋರೆಯೇಂ? ಪರಮಪಾಪಿಯು ನಾಂ ನೀಚರೊಳು ನೀಚಂ. ಘಾತಕಂ, ಜೂಜುಗಾರಂ, ಸ್ವಸ್ತ್ರೀಯ ಸೆರಗ ಹರಿದುಟ್ಟುಪಾಯ್ದೋಡುತಿನ್ನುಂ ಬದುಕಿರ್ಪ ಭಂಡಂ."

ಬಿಕ್ಕಿಬಿರಿದಂತಳುತಲಾ ಭೂವರಂ ಚಿತ್ತದೊಳಗೊಂದೊಂದನೇ ನೆನೆದು ನೃಪವರಂ ಮರುಗುತಿರೆ ಕವಿದಿರ್ದ ಕತ್ತಲೆಯ ಗಗನದೊಳ್ ಬೆಳ್ಳಿಮೂಡಿರ್ದುದೆನೆ ಪರ್ಣಾದನೆಂಬವಂ ಬಂದಿರ್ದ ದಿನದಂದು ತಾನವನ ಮುಖದಿಂದೆ ಕೇಳಿರ್ದ ಬೇಹಿನಾ ನುಡಿಯೊಡನೆ ಮೂಡಿತಾ ಗಂಧರ್ವನಾ

ಘೇಶ ತಾಂ ಮನಃಫಲಕದಲಿ ಮಾಡುತ್ತೆ ದುಃಖೋದ್ವೇಗಮಂ ಮೇಣ್ ಕರಿಕಿದಾಸೆಯ ಸೊಡರ ಕುಡಿಯಂ ಬೆಳಗಿಸುತ್ತೆ.

ತುಂಬಿರ್ದ ನದಿಯ ನೀರಿನೊಳಿಳಿದು ಕಾಲ್ಜಪ್ಪಿ ಮುಳುಗುತ್ತೇರುತೆ ಸೆಳೆತದೊಳ್ ಸಾಗುತಿರೆ ತೇಲಿ ಬಹ ಮರದ ಕೊರಡಂ ಕಂಡು ಕೈನೀಡಿ ಪಿಡಿದದಂ ಬದುಕುವಾಸೆಯ ಸಂತಸದಿ ಕಾಲ್ಪಿಡಿಯುತೆಂತಾದೊಡಂ ದಡವ ಸೇರ್ದಪೆನೆಂದು ಸಾಹಸವನಾಂತಿರ್ದ ಪಥಿಕನೊಲ್ ಕಟ್ಟಕಡೆಗಾ ಸಳನೃಪಂ ಮನದೊಳಗೆ ಮೂಡಿರ್ದ ಭಾವಮಂ ನೆನೆಯುತಿರ್ದಂ ಗುಡುಗಿನಬ್ಬರವ ಕೇಳ್ದಂದು ತನ್ನಾಸೆಯಂ ಕೊನರಿಸಿದ ಚಾದಗೆಯ ತೆರದಿ.

ಅನಿತರೊಳ್ ಭೇಷಜವನರಸಿ ನಡೆದಿರ್ದ ಜೀವಲಂ ಬಂದು ತಾಂ ತಂದಿರ್ದ ಲೇಪನವನಾ ನೃಪನ ಗಾಯದೊಳ್ ಲೇಪಿಸಲ್ ವ್ಯೆತಿಳಿದನೆನೆ ಬಾಹುಕಂ ಮೇಲೆದ್ದು ನಡೆಯುತಿರ್ದಂ ತುರಗಶಾಲೆಯ ಕಡೆಗೆ ಜತೆಯಾಗಿ ಜೀವಲಂ ಮಾತಾಡಿ ನಡೆಯುತಿರಲು.

ವಿಪ್ರನನ್ನರಸುತ್ತೆ ಸುತ್ತಾಡಿ ಕಾಣದಾ ರಾಹುತರ್ ಬಂದೊರೆಯಲಾ ವಾರ್ತೆಯಂ ಕೇಳ್ದೊಡನೆ ಕೋಸಲಾಧೀಶ್ವರಂ ಮರುಗಿದಂ ಜೀವದೊಳ್ ತಾನಿರ್ದು ಪೂರ್ವಜರ ಧರ್ಮ ತಾಂ ಕೆಟ್ಟಿತೆಂದು; ಕಿವಿಯಾರಿ ಕೇಳುತ ನ್ಯಾಯಮಂ ತಡೆವ ಶಕ್ತಿಯಂ ಪಡೆದಿರ್ದು ಹೆಳವನಂತಾಯ್ತೆನ್ನ ಬಾಳೆಂದು ಮತ್ತಡಿಗಡಿಗೆ ಸುಯ್ಯುತ್ತೆ ಸಾಕೇತನಾಥಂ ಮುಂದಾವಯತ್ನಮಂ ಕಾಣದೆಯೆ ತಾನೆಂತಾದೊಡಂ ತೆರಳಿ ಭೀಷ್ಮಕನ ಕಂಡಪುದೆ ಕರ್ತವ್ಯಮೆಂದರಿದು "ವರೂಥಮಂ ತಾರೆ"ಂದು ಸಾರಥಿಗೆ ನೇಮಿಸಿದನು.

ನೃಪನಾಜ್ಞೆಯಿಂ ಸೂತತಾಂ ಲಾಯದಿಂ ಹಯಗಳಂ ಕೊಂಡೊಯ್ದು ಬಂಧಿಸಲ್ ಸ್ಯಂದನಕೆ ವಿವರಮನ್ನರಿಯುತ್ತೆ ಬಾಹುಕಂ ರಾಜೇಂದ್ರನಂ ಕಂಡು ಕೈಮುಗಿದು "ನಡೆಯಲಾರವು ಜೀಯ ಜೋಡಿಸಿದ ತೇಜಿಗಳ್ ನಿಮ್ಮವಸರಕೆ ಸಾಲದೆ"ಂದೊರೆದುದಂ ಕೇಳುತಾ ಭೂವರಂ ಕಿನಿಸಿನಿಂ "ಬಲ್ಲೆಯೇಂ ನೀನಶ್ವಹೃದಯಮಂ ಪೇಳೆ"ನಲ್ ವಿನಯದಿಂ "ಬಲ್ಲಿದರ ಸಹವಾಸದೊಳ್ ಬಾಲ್ಯಮಂ ಕಳೆದಿರ್ಪ ತಾನೆ"ಂದು ಬಿನ್ನೈಸಿ ದೂರದೊಳ್ ನಳನೃಪಂ ಕೈಕಟ್ಟಿ ನಿಂದಿರ್ದನು.

ಬಾಹುಕನ ವರ್ತನಕೆ ಭೂವರಂ ಮುನಿದನಾತಂಗೆಂದೊಳಗೊಳಗೆ ಸೂತತಾಂ ಸಂತಸದಿ ನಲಿಯುತ್ತೆ ಮೇಣೋರೆಗಣ್ಣಿಂ ಮತ್ತವನ ನೋಡಿ ಹಂಗಿಸುತೆ ಜೋಡಿಸಿದ ತುರಗಂಗಳಂ ಮೈಯುಜ್ಜಿ ಮುತ್ತಿಟ್ಟು ತನ್ನಾಯ್ಕೆಯೇ ಸರಿಯೆಂದು ತೋರುತಿರ್ದಂ ಕೊರಳ ಕೊಂಕಿಸುತೆ ಮಹಾಯೋಗಿಯಂ ಜ್ಞಾನಶೂನ್ಯಂ ಮನದೊಳಗೆ ಹಳಿವ ತೆರದಿ.

ಸಾರಥಿಯ ಭಾವಮಂ ಬಗೆಗೊಂಡು ಬಾಹುಕಂ ಬಗೆವಿಡಿದು ಕ್ರೋಧದುದ್ರೇಕಮಂ ಮೌನದೊಳ್ ಕೆಳದುಟಿಯ ಜಗಿಯುತ್ತೆ ಮೇಣುದ್ವಿದ್ದ ಶ್ವಾಸಮಂ ಸೇವಿಸುತೆ ಯಮುನದಿಗ್ಭಾಗಮಂ ದಿಟ್ಟಿಸುತೆ ನಿಂದಿರ್ದುದಂ ನೋಡುತಿರ್ದಾ ಭೂವರೇಣ್ಯಂ ಮತ್ತಿನ್ನೇನ ನೆನೆದನೋ ಮನದಿ ಬಳಿಗೈದಿ ಬಾಹುಕನ ಮತ್ತೊಮ್ಮೆ ದೃಷ್ಟಿಸುತೆ ನುಡಿದನಿಂತು "ಪೊಸತೇಜಿಯಂ ಪಳಗಿಸಿದ ಜಾಣನೀಂ. ಮನಕೆ ಬಂದುದು ಮಾತು. ಮುನಿಸಿಲ್ಲ ಬಾಹುಕನೆ ಧರ್ಮರಕ್ಷಣೆಯ ದೀಕ್ಷೆಯಂ ತಳೆದಿರ್ಪೆನಾಂ. ಅದಕಾಗಿ ಕುಂಡಿನಾಪುರಕೆನ್ನ ಪಯಣಂ. ನಾಳೆ ಸಂಜೆಗೆ ಮೊದಲು ಭೀಷ್ಮಕನ ಪುರವನಾವ್ ಸೇರದಿರೆ ನಿಷಧೇಶನರಸಿಯಂ ಬೇರೊರ್ವನಿಂಗಿತ್ತು ಅನ್ಯಾಯಮಂ ಗೈದಪರು. ಸಾಧ್ಯಮಪ್ಪುದೆ ಪೇಳ್ ಸಕಾಲದೊಳ್ ನಾವಲ್ಲಿ ಸೇರ್ದಪುದು?"

ಕೇಳ್ದೊಡನೆ ಬಾಹುಕಂ ನಲವಾಂತು ಕೈಯೆರಡರಂ ಜೋಡಿಸುತೆ "ಧರ್ಮಕಾರ್ಯಕೆ ದೈವದೊಲ್ಮೆ ತಾಂ ಬಾರದಿರ್ದಪುದೆ ಜೀಯ? ಹೊತ್ತೇರಿ ಹತ್ತು ಘಳಿಗೆಯ ಮೊದಲು ನಾಳೆ ನಾವ್ ಮದುವೆ ಮಂಟಪವ ಸೇರ್ದಪೆವು ತಳುವದೆನಗಾಜ್ಞೆಯಂ ನೀಡಿದೊಡೆ ಸಾರಥ್ಯಮಂ ಕೈಗೊಂಡು. ಭೂತನಾಥಂ ಕರುಣಿಸಲ್ ಸಾಕೇತನಾಥನಂ ಕೊಂಡೊಯ್ದು ಮದುವೆಯಾ ಹಂದರದಿ ಬಿಟ್ಟಪೆಂ ನಾ"ನೆಂದು ಕೈಮುಗಿದನು.

ಮೈಸುಟ್ಟು ಮುದುಡಿರ್ದ ಪಕ್ಷಿಯಾಕ್ಷಣವೆ ಗರಿ ಮೂಡಿ ನೆಗೆದಂತೆ ಹರ್ಷರಸಮುಕ್ಕುತಿರೆ ತನ್ನ ತಾಂ ಲಕ್ಷಿಸದೆ ಋತುಪರ್ಣ ಭೂವರೇಣ್ಯಂ ಬಾಹುಕನ ಮೈತಬ್ಬಿ ಶೀಘ್ರದೊಳ್ ಕುಂಡಿನಾಪುರಕೆನ್ನ ಕೊಂಡೊಯ್ದು ಧರ್ಮಮಂ ಬೆಳಗಿಸಲ್ ಸಸ್ನೇಹಮಂ ನೀಡೆಂದು ಮತ್ತವನ ಕೈಯ್ಯಂ ಪಿಡಿದೆಳೆದು ಬೆನ್ನಂ ತಟ್ಟಿ ಕಳುಹುತ್ತೆ ಮಣಿಖಚಿತ ಭೂಷಣಂ

ಗಳಂ ತರಿಸಿ ಧರಿಸುತ್ತೆ ತುಂಬಿರ್ದ ತೂಣೀರವಮಂ ಬಿಗಿದು ಬಿಲ್ಪಿಡಿದು ತುದಿಗಾಲ ಕುದುರೆಯೊಲ್ ಬಾಹುಕನ ಬರವನೇ ಕಾದುತಾಂ ನಿಂದಿರ್ದನು.

ರಾಜಾಜ್ಞೆಯಂ ಕೈಗೊಂಡು ನಡೆದಿರ್ದ ನಿಷಧೇಶ್ವರಂ ಮನದೊಳಗೆ ಮಾದೇವನಂ ಪ್ರಾರ್ಥಿಸುತೆ ಹಯದ ಲಾಯಮಂ ಸೇರ್ದಲ್ಲಿ ನಿಂದಿರ್ದ ವಾರುಹಂಗಳ ರಾಜಿಯಂ ಬಳಿಸಾರಿ ಮತ್ತವುಗಳಂ ಮುಟ್ಟಿ ಮುದ್ದಾಡಿ ನಿತ್ಯದೊಲ್ ದಮಯಂತಿಯಂ ನೆನೆನೆನೆದು ಮರುಗುತ್ತೆ ಮಲಗುತಿರ್ದಾ ತಾಣಮಂ ಸೇರುತ್ತೆ ತನ್ನರಸಿಯಾ ಸೀರೆ ಸೆರಗಂ ಮತ್ತಂ ತೆಯೋ ಗಂಧರ್ವಸಿತ್ತಿದ್ದ ವಸನಂಗಳಂ ಕೂಡಿ ಕಟ್ಟಿರ್ದ ಕಿರುಗಂಟಿನಾ ತನ್ನ ಸೌಭಾಗ್ಯ ಸರ್ವಸ್ವಮಂ ಗೂನುಬೆನ್ನಿಗೆ ಬಿಗಿದು ಕುದುರೆಗಳ ಸಮುದಾಯದಿಂ ತನ್ನಾಯ್ಕೆಗೊಪ್ಪುಗಿ ಬಂದಿರ್ದ ಸೈಂಧವಂಗಳ ಜೋಡಿಯಂ ಪಿಡಿದೊಡನೆ ಬಂದೊದಗಿ ಋತುಪರ್ಣನಂ ವಂದಿಸಲ್ ಕೃಶವಾದ ತುರಗಗಳಂ ಕಂಡು ಮೊದಲಿರ್ದ ಸೂತ ತಾಂ ದೂರದೊಳ್ ಪರಿಹಾಸ್ಯಮಂ ಗೈಯುತ್ತೆ ನಗುತಿರ್ದನು.

ಲೆಕ್ಕಿಸದೆ ಮತ್ತವನ ಮರುಳಾಟಮಂ ನಳ ನೃಪಂ ತಂದಿರ್ದ ತುರಗಂಗಳಂ ಬಂಧಿಸಲ್ ಸ್ಯಂದನಕೆ, ಕೋಸಲೇಶಂ ಮನದಿ ತನ್ನೆಣಿಕೆ ಕೈಸಾರ್ದುದೆಂದೊಳಗೊಳಗೆ ಹಿಗ್ಗುತ್ತೆ ತನ್ನಾಪ್ತ ಸೂತನಂ ಜತೆಗೂಡಿ ಮಾತೇರನೇರಿದಂ ಬಾಹುಕಂ ಕುದುರೆಗಳ ಚಪ್ಪರಿಸಿ ವಾಘೆಯಂ ಪಿಡಿದೆಳೆಯೆ ತೇರಿರದೆ ಹಾರಿತಾ ಹೆದೆಯೇರಿ ಹಾರಿರ್ದ ಮಾರ್ಗಣದ ತೆರದಿ.

ಕತ್ತಲೆಯನುಗ್ಗೊತ್ತಿ ಪೂರ್ವಾದ್ರಿ ಶಿಖರದಿಂ ಮೇಲೇರಿ ಬಹ ತಪನ ತೇರಂ ಪೋಲ್ದು ಕಣ್ಮುಚ್ಚಿ ಬಿಡುವನಿತರೊಳ್ ಬಹುದೂರದೂರಮಂ ಕ್ರಮಿಸುತಿರ್ದುದು ರಥಂ. ಮಡದಿಯಂ ನೆನೆನೆನೆದು ಮುಂದೋಡುತಿಹ ನಿಷಧಾಧಿಪನ ಮನದಾಸೆಯಂತೆ ಗಾಳಿಯೊಳ್ ಸೇರಿರ್ದ ಸೌರಭದ ತೆರದಿಂದೆ ವೇಗದೊಳ್ ಹಾರುತಿರ್ದುದು ತೇರು ನಳನ ಕೈಚಳಕದೊಳ್. ಸಾಕೇತದರಮನೆಯ ಬಿಟ್ಟತ್ತ ಪಟ್ಟಣವ ದಾಂಟುತ್ತೆ ಕೋಸಲದ ರಾಜ್ಯದುದ್ದದೊಳ್ ಸಾಗುತ್ತೆ ಶೃಂಗಬೇರದ ಹಳ್ಳಿಯಂ, ಗಂಗೆಯಂ ಕಳೆಕಳೆದು ಮುಂದೊತ್ತಿ ನಿರ್ಜನಾರಣ್ಯಮಂ ಪೊಕ್ಕು ಪೊರಡುತ್ತೆ ಬೈಲಿನೊಳ್

ಮತ್ತೋಡುತಿರ್ದುದು ರಥಂ. ವೈದರ್ಭಿಯನುಪಮಪ್ರೇಮ ತಾಂ ನಳ ನೃಪನ ಸೆಳೆಯುತಿರಲು ಭೂಮಿಯುಂ ಮೆಟ್ಟುತುಪ್ಪರಿಸಿ ನೆಲನನೆಲ್ಲಿಯುಂ ಮುಟ್ಟದಂತೋಡುತಿಹ ವಾಜಿಗಳ ತೇರೆಳೆವ ಸಾಹಸಕೆ ರಥಾಗ್ರದೊಳ್ ಕಟ್ಟಿರ್ದ ಕೇತು ತಾಂ ಮೆಚ್ಚಿರ್ದ ಕೋಸಲೇಶನ ಮನಸಿನೊಲ್ ಕುಣಿಯುತಿರ್ದುದು ಭರದಿ. ಮತ್ತಂತೆಯೇ ನಡುಗುತಿರ್ದಂ ನೃಪನ ಸೂತಂ ಕರ್ಕಶದ ರಥಚಕ್ರನಿಸ್ವನಕೆ ಪೆಣ್ ಕೀಲಚ್ಚಿನೋಳ್ ಕಿರ್ರೆಂದು ಸಪ್ಪಳಂ ಕೇಳುತಿರೆ ಬೆದರಿ. ಕೆಂದೂಳಿಯಭ್ರಮಂ ಮುಚ್ಚಿರಲ್ ಮುಗಿಲಿನೊಲ್ ಗುಡುಗುತಿರ್ದುದು ರಥಗತಿಯು ಮಹಾರವಂ. ಕುದುರೆಗಳ ಕಾಲ್ತಾಗಿ ಕಲ್ಲೊಡೆದು ಕಿಡಿಯೆದ್ದು ಕುಡಿಮಿಂಚು ಮಿಂಚುತಿರೆ ಮುಂಗಾರ ಕಹಳೆಗಳ್ ಮೊಳಗಿದೊಲ್ ನಿಸ್ವನಂಬೆತ್ತು ಮುಂದೋಡುತಿರ್ದುದು ರಥಂ ಕುಂಡಿನಾಪುರದತ್ತ. ಶೀತಾಂಶುವಂಶ ವಾರಿಧಿಚಂದ್ರ ತಾಂ ಕೋರೈಸೆ ತನ್ನೊಡಲಬಡಬನಿಂ ಬತ್ತಿರ್ದ ಸಾಗರವನುಬ್ಬಿಸಲ್ ಮೇಘಮಂಡಲದಂಚಿನಿಂ ತೂರಿಬಹ ಪೂರ್ಣಚಂದ್ರಿಕೆಯ ತೆರದಿ ಪವನನಂ ಪಿಂದಿಕ್ಕಿ ತೇರೆಳೆವ ವಾಜಿಗಳ್ ಗರಿಮೂಡಿ ಗಗನದೊಳ್ ಹಾರುತಿರ್ದಂತೆ ಕಾಣುತಿರೆ ಖೇಚರಪ್ರತತಿ ತಾಂ ತಲೆದೂಗೆ ತೇರನೇರಿರ್ದವರ ಕಣ್ಣುಕಿವಿಮೂಗುಗಳ್ ಚೈತನ್ಯಮಂ ಕಳೆದಿರಲ್ ಋತುಪರ್ಣ ಭೂವರೇಣ್ಯಂ ಬಾಹುಕನ ಜಾಣ್ಮೆಯೊಳ್ ತನ್ಮಯಂ ತಾನಾಗಿ ಚಿತ್ರಿಸಿದ ಮೂರ್ತಿಯೊಲ್ ಕುಳ್ಳಿರ್ದನು.

ಮೊದಲೊಳೇ ಬೆದರಿ ನಡುಗಿರ್ದ ಸೂತನೆದೆಯಿಂದೆ ಸಾಕೇತನಾಥನಂ ಬಳಿವಿಡಿದು ಬಂದಿರ್ಪೆ ತಾನೆಂಬ ತಿಲದ ತೂಕದ ಧೈರ್ಯ ತಾಂ ತಕ್ಷಣವೆ ಸಿಡಿದೊರೆದು ಹಾರಿರ್ದುದೆನೆ, ಕೋಸಲೇಶಂ ಧರಿಸಿರ್ದ ಮೈಮೇಲಿನುತ್ತರಿಯಂ ಮಾರುತನ ಹತಿಯಿಂದೆ ಹಾರಿತಾ ಸೂತತಾಂ ಕಳವಳದಿ ಬೊಬ್ಬಿಡುತಲಿರಲು ಬೊಬ್ಬಾಟಮಂ ಕೇಳ್ದೊಡನೆ ತಿರುಗುತೀಕ್ಷಿಸುತೆ ಭೂವರಂ ಕಾರಣವನರಿತಾಗಲಾಕ್ಷಣದಿ ಬಾಹುಕಂಗೊರೆಯಲಾತಂ ನಕ್ಕು "ಯೋಜನಾಂತರದೂರದೊಳ್ ಬಿದ್ದಿರ್ಪುದಾವಸನಮಿನ್ನೇಂಗೈದಪೆವು ನಾವೆ"ಂದು ಪೇಳುತ್ತೆ ಹಾರಿಸಿದನಾರಥವ ತಾಂ ವೇಗದಿಂದೆ.

ನಸುನಕ್ಕು ತೇರನಿರದೋಡಿಸುತೆ ನುಡಿದಿರ್ದ ಬಾಹುಕನ ನುಡಿ

ಗಳಂ ಕೇಳ್ದೊಡನೆ ಋತುಪರ್ಣಭೂನಾಥ ತಾಂ ತಾಳಿದಚ್ಚರಿಯೊಳಾ ಬಾಹುಕನ ವ್ಯಕ್ತಿತ್ವದೊಳ್ ಸಂದೆಯಂಗೊಂಡು ಬೆಕ್ಕಸದಿ ಕುಳ್ಳಿರ್ದೊಡಂ ರಥಗತಿಯ ದೆಸೆಯಿಂದೆ ಪೆರ್ಚುತಿರೆ ಮನದೊಳಗೆ ಮೂಡಿರ್ದ ಕೌತುಕಂ. ದಿಟವಿದೇನೆಂದರಿಯದಾ ನೃಪೋತ್ತಮಂ ತಾನರಿಯದಾ ಪಟ್ಟಣದಿ ಹೊಲಬನರಸುವ ಬಡವನೋಲ್ ಚಡಪಡಿಸಿ ಮುಂದಾವ ಹದನಮಂ ಕಾಣದೆಯೆ ನಿಜವರಿವೆತಾನೆಂದು ತನ್ನರಿವೆಯಂ ನೇವರಿಸಿ ಕವಣೆಯೊಳ್ ಬಿಟ್ಟಿರ್ದ ಕಲ್ಲಿನೊಲ್ ನಿಲ್ಲದೋಡುತಲಿರ್ದ ಮಾತೇರ ಮೇಲಿನಿಂ ಶಿವಶಿವಾ ದುಮ್ಮಿಕ್ಕಿದರು ಭೂತಳಕೆ ನೆಗೆದು.

ಪವಮಾನವಾಹನದಿ ಪಾಯ್ದೋಡುವಾ ನೀರದಂಗಳ ಸಿಡಿದು ಮಳೆಕಲ್ಲು ಭೂಮಿಯೊಳ್ ಬೀಳ್ವಂತೆ ಸ್ಯಂದನವ ಬಿಟ್ಟುತ್ತ ಹಾರಿರ್ದ ಋತುಪರ್ಣನಂ ಕಾಣಕಾಣುತೆ ಕೋಲ್ಮಿಂಚಿನತಿಶಯದ ವೇಗಮಂ ಮೀರಿಸುವ ತೇಜಿಗಳ ತಾಂ ತಡೆದು ತಕ್ಷಣವೆ ಬಾಹುಕಂ ನಿಲ್ಲಿಸಿದನಾ ವರೂಥಮಂ ತಾಳಲಯದಂತ್ಯದೊಳ್ ನಿಲ್ಲಿಸಿದ ನೃತ್ಯದಂತೆ.

ತೇರನುಳಿದಲ್ಲಿಂದೆ ದುಮ್ಮಿಕ್ಕಿ ನೆಲದಮೇಲ್ ನಿಂದಿರ್ದನಾ ಕೋಸಲೇಶಂ ಮತ್ತದೇ ತೇರನಲ್ಲಿಯೆ ತಡೆದು ನಿಲ್ಲಿಸುತೆ ಮುಂದಿನಾಜ್ಞೆಯಂ ಬೇಡುತಿಹ ಭಂಗಿಯಿಂ ಕೈಮುಗಿದು ನಿಂದಿರ್ದನಾ ಬಾಹುಕಂ, ಕಾಣುತೀ ನೋಟಮಂ ಮೇಣಿರ್ವರುಂ ಗೈದಿರ್ದ ಸಾಹಸವನುಂ ರಥದ ಮೇಲಲ್ಲಿ ಬೆಚ್ಚುತ್ತೆ ಕುಳ್ಳಿರ್ದ ಸೂತತಾಂ ತನ್ನ ಕೈ ಬೆರಳ ಕಚ್ಚುತ್ತೆ ನಿಂದಿರ್ದನು. ಶ್ವಾಸಮಂ ಬಂಧಿಸುತ್ತೋಡಿಕಾರಿರ್ದ ಬಾಯ ಬೆಳ್ನೊರೆಯನಾವಾಜಿಗಳ್ ರಸನೆಯಿಂ ನೆಕ್ಕುತ್ತೆ ನಿಂದಿರ್ದ ತಮ್ಮೊಡೆಯರಂ ಕೊರಳ ನಿಮಿರಿಸುತ್ತವಲೋಕಿಸುತೆ ಕೈಕಾಲ್ಗಳಿಂ ನೆಲವ ಕೆದರುತ್ತೆ ಮತ್ತೊಡನೊಡನೆ ಹೇಂಕರಿಸುತ್ತೆ ಮುಂದೋಡ್ವ ಸಾಹಸವ ತೋರುವಾತುರದೊಳುಬ್ಬುತ್ತೆ ಸಾರಥಿಯ ಸನ್ನೆಯಂ ಕಾಯುತ್ತೆ ನಿಂದಿರ್ದುವು.

ತತ್ಕ್ಷಣದೊಳ್ ಚಮ್ಮಟಿಗೆಯಂ ತುರುಕುತ್ತೆ ಕೈಯಂ ಜೋಡಿಸುತೆ ನಿಂದಿರ್ದ ಬಾಹುಕಂ ಮೌನಮುನ್ನೊಡೆದು ಭೂಲಲಾಮನಂ ಕುರಿತೆಂದ "ನೆಲೆ ರಾಜೇಂದ್ರ ಮತ್ತಾವನಾಂಗೈದ ತಪ್ಪಿತಕೆ ತೇರನುಳಿದಿಲ್ಲಿ ನಿಂದಿರ್ಪೆ! ಮನ್ನಿಸೆನ್ನಂ ನೀ"ನೆನಲ್ ಋತುಪರ್ಣನಾತನಂ ಬರಸೆಳೆದು ಮತ್ತವನ

ಜೋಡಿಸಿದ ಕೈಗಳಂ ತನ್ನೆರಡು ಹಸ್ತಂಗಳಿಂ ಪಿಡಿದವನ ಮೊಗ ವನೇ ದಿಟ್ಟಿಸುತೆ ನುಡಿದನಿಂತು "ವೀರವರ ಬಾಹುಕನೆ ತಪ್ಪಿದೆಯನೀಂ? ತಪ್ಪಿದುದು ನೀನಲ್ಲ. ನಿನ್ನೊಳಾಂ ತಪ್ಪಿದೆಂ ಕ್ಷಮಿಸೆನ್ನ ಗುಣಮಣಿಯೆ ಕೇಳ್ ನಿನ್ನೊಳಿರ್ದನುಪಮದ ವಿದ್ಯೆಯಂ ತಿಳಿಯದಾದೆಂ ಮುನ್ನ. ನೀ ನಶ್ವ ಹೃದಯಮಂ ತಿಳಿದಿರ್ಪೆ. ಪೆರರಾರು ನಿನ್ನಂತೆ ತಿಳಿವರೀ ಧಾತ್ರಿ ಯೊಳ್! ಸುರಸೂತಂಗೆ ದೊರೆ ನೀನು. ನಿನ್ನರಿವಿನಾ ಬಲ್ಮೆಯೊಳೆ ಪಳಗ ದಿರ್ದಾ ತೇಜಿಯಂ ಪಳಗಿಸಿದೆ. ನಿನ್ನಲಂದು ಕಂಡಿರ್ದ ಸಾಹಸಕೆ ಮೆಚ್ಚಿ ದೊರ್ಡಂ ನಿನ್ನನಾಂ ಮಾನಿಸದೆ ಪಿಂದುಳಿದೆ. ಮನ್ನಿಸೆನ್ನಂ, ಕೋಸಲವ ಬಿಟ್ಟೆನಿತೆನಿತೋ ದೂರಮಂ ಕ್ರಮಿಸುತ್ತೆ ಬಂದೆವಾವ್ ನಿನ್ನದಯೆಯಿಂದೆ. ತೇರಿಂಗೆ ತುರಗಂಗಳಂ ಬಂಧಿಸುತ ಮತ್ತವುಗಳಂ ಬೋಳೈಸಿ ಹಾರಿಸುವ ನಿನ್ನನ್ನರಾ ಬಲ್ಲಿದರ ಕಂಡಿಲ್ಲ ನಾಂ. ಮಹಾವೀರ ನೀಂ ಬಾಹುಕನೆ ಪೇಳೆ ನಗೆ ನೀನಾರು ನನ್ನೂಹೆ ಸರಿಯಾಗೆ ಕೈತವದ ವೇಷದೊಳ್ ಬಂದೆನ್ನ ಸೇರಿರ್ಪ ನೀನಾವನೋ ಪ್ರಾಜ್ಞ ಪುರುಷಂ. ಮಹಾನುಭಾವಂ ಪೇಳಯ್ಯಾ ದಿಟಮಲ್ಲಮೇಂ ಪೇಳು ಮತ್ತಾವ ನೋಂಪಿಯಂ ಕೈಗೊಂಡು ನೀನಜ್ಞಾತ ವಾಸದೊಳ್ ದೀನತೆಯನಾಂತಿರ್ಪೆ? ಮತ್ತಿದೇಂ ವಿಕರಾಳ ರೂಪತಾಂ ಹುಟ್ಟೆನಿಂ ಬಂದಿರ್ದುದೇ? ನೀನಾಗಿ ಕಟ್ಟಿರ್ದುದೇ? ಮತ್ತಲ್ಲದೊಡೆ ಸಾಧು ಗಳ ಶಾಪದಿಂ ಬಂದಪುದೇ? ಅಂತಾದೊಡಾವ ತಪ್ಪಿಗೆ ಶಿಕ್ಷೆಯಂ ಪಡೆ ದಿರ್ಪೆ? ಓ ಎನ್ನ ಸಖನೇ ಬಾಹುಕನೆ ಪೇಳೆನಗೆ ನಿನ್ನಿರವ. ನನ್ನಿಯು ನ್ನೊರೆದೆನ್ನ ಚಿತ್ತಮಂ ತಣಿಸಯ್ಯ! ಓ ಕೆಳೆಯ ನೀನಾರು ಪೇಳೆ"ನಲ್ ನೋಡುತಿರ್ದಂ ನಳಂ ಕಣ್ಣೀರು ಸುರಿಯುತಿರೆ ಮೌನದೊಳ್ ಬಾಂದ ಳದ ಕಡೆಗೆ.

ಬಗೆಬಗೆಯ ನುಡಿಯಿಂದೆ ನುಡಿಸಿರ್ದೊಡಂ ಮಾರ್ನುಡಿಯದಿದ್ದಾ ತನಂ ನೋಡುತ್ತೆ ತೊಟ್ಟಿಕ್ಕುವಾ ನಯನವಾರಿಯಂ ವೃದ್ಧರೊಲ್ ತನ್ನು ಡೆಯ ತುದಿಯಿಂದೆ ಮತ್ತೊರಸಿ ಕೋಸಲೇಶಂ ಬಹುವಿಧದಿ ಕಾಡುತ್ತೆ ಕೈಯಂ ಪಿಡಿಯುತೆಳೆದೆಳೆದು ಬಾಲರೊಲ್ ಪೇಳು ನೀನಾರೆಂದು ಬೆಸಗೊಳ್ಳುತಿರೆ ಗದ್ಗದಿತಕಂಠದಿಂ ಪೇಳಲಾರದೆ ನಳಂ ಬಿಕ್ಕಳಿಸುತು ಸುರಿದಂ ಜೂಜಿನೊಳ್ ದುರ್ದಸೆಗೆ ತುತ್ತಾಗಿ ನವೆದಿರ್ದ ಮೇಣ್ ತನ್ನರಸಿ

ಯಿಂ ಬಿಟ್ಟು ನಡೆದಿರ್ದ ತನ್ನಾತ್ಮ ವೃತ್ತಾಂತಮೆಲ್ಲಮಂ ಬಾಷ್ಪಲೋಚನನಾಗಿ ಸಾಕೇತನಾಥ ತಾಂ ಕೇಳುತಿರಲು.

ಕಥೆಯೆಲ್ಲಮಂ ಕೇಳುತಿರೆ ಶೋಕರಸಮೊತ್ತರಿಸಿ ಬಿಗಿದು ಬರುತಿರೆ ಕೊರಳು, ಮನುಕುಲೋತ್ತಂಸ ತಾಂ ಮಾನವರ ಪ್ರಾರಬ್ಧಮಂ ಮೇಣ್ ವಿಧಿಯ ವೈಚಿತ್ರ್ಯಮಂ ನೆನೆನೆನೆದು ಮರುಗುತ್ತೆ ನಿಷಧೇಂದ್ರನಂ ಪಿಡಿದಪ್ಪಿ ಸಂತೈಸಿ ನುಡಿದನಿಂತು "ದ್ಯೂಗುಡಮಂ ಬಿಟ್ಟು ಕಳೆ ನೃಪವರನೆ ನೋಡದೋ ಕರ್ಮಸಾಕ್ಷಿಯು ಪೇಳುಗುತಿಹನಲ್ಲಿ 'ಮುಂಜಾವಿನೊಳ್ ನಾಳೆ ನಿನ್ನೆದೆಯ ಕಮಲಮಂ ಬಿರಿಯಿಸಲ್ ಬಂದಪೆನು ಮೂಡಿ'ಯೆಂದು. ನಾನವನ ಸದ್ವಂಶದೊಳ್ ಜನಿಸಿರ್ಪೆ ಮತ್ತಾತನೊಲ್ಮೆಯಿಂ ಕೋಸಲವನಾಳುತಿರ್ಪೆ. ತೆರೆದೆದೆಯ ಕೂರ್ಮೆಯೊಳ್ ನಿನ್ನನಾನಪ್ಪುವೆಂ. ಒಪ್ಪು ನೀಂ ನಾನಿನ್ನ ಕೆಳೆಯನೆಂದು. ಓಯೆನ್ನ ಸಖನೆ ನೈಷಧನೆ ಸೂರ್ಯಾತ್ಮಜನ ದೆಸೆಯಿಂದೆ ನಿನಗೆ ಕಷ್ಟತಾಂ ಬಂದಿರ್ದೊಡಂ ನೀನಕ್ಷಹೃದಯಮಂ ತಿಳಿಯದೆಯೆ ಪುಷ್ಕರನ ಜೂಜಿನೊಳ್ ಸೋತಿರ್ಪೆ. ದೈವಕಲ್ಪಿತವ ಮೀರ್ವರಾರೀಜಗದಿ? ಓ ಕೆಳೆಯ! ಬಲ್ಲೆನಾನಾ ವಿದ್ಯೆಯಂ ಪೇಳ್ವಪೆಂ ನಿನಗೆ. ವೃಕ್ಷಮೊಂದಂ ಕಂಡೊಡನೆ ಒಂದೆರಡುಮೂರರೆಣಿಕೆಯೊಳ್ ಲೆಕ್ಕಮಂ ಮಾಡದೆಯೆ ಮರದೆಲೆಗಳಂ ಸಂಖ್ಯೆಯೊಳ್ ಪೇಳಲಪ್ಪುದು ಸಾಧ್ಯಮಾ ವಿದ್ಯೆಯೊಳ್. ಮತ್ತಂತೆಯೇ ಜೂಜಿನೊಳ್ ಜಯುವ ಪಡೆದಪುದು ನೋಡು ಪೇಳ್ವೆನಾಂ ನಿನಗದರ ಮರ್ಮಮಂ ಕೇಳೆ"ಂದು ಪೇಳುತಿರೆ ನಿಷಧೇಶ್ವರಂ ಸಂತಸದೊಳಾ ವಿದ್ಯೆಯಂ ಕೈಗೊಂಡು ಮತ್ತಶ್ವ ಹೃದಯಮಂ ವಿನಿಮಯದ ಕ್ರಮದಿಂದೆ ಕೋಸಲೇಶಗೆ ಬೋಧಿಸಿದನು. ತಾವರಿಯದಿರ್ದೊಂದೊಂದು ವಿದ್ಯೆಯಂ ತಿಳಿಯುತಾ ಭೂಪಾಲರಿರ್ವರುಂ ಸಂತಸವ ತಾಳ್ದಿರಲ್ ವೈದರ್ಭೆಯರಸ ತಾಂ ಗಂಧರ್ವನಾದೇಶದೊಲ್, ಗಿರಿಜೇಶನಂ ಪ್ರಾರ್ಥಿಸೆ ಅನ್ನೆಗಂ ದೂರ ಪೂರ್ವದಿಗಂತದಿಂ ನಳನೃಪನ ಸೌಭಾಗ್ಯ ತಾಂ ಗರಿಮೂಡಿ ಬಂದಿರ್ದದೆನೆ ಹೊಂಬಣ್ಣದಾ ಹಕ್ಕಿಗಳ್ ತಂದೊಪ್ಪಿಸಿದುವಾ ನಿಷಧಾಧಿಪನ ವಸನಮಂ ಪಾದದೊಳ್ ಹಿಂದೊರ್ಮೆ ಗೈದಿರ್ದ ತಪ್ಪಿತವನೊಪ್ಪುವಂತೆ.

ಕಳೆದಿರ್ದ ಧೋತ್ರಮಂ ಕಂಡೊಡನೆ ಹರ್ಷಿಸುತೆ ಮಾದೇವನಂ

ಮಾನಸದಿ ವಂದಿಸುತೆ ನಳನೃಪಂ ವಸನಮಂ ಕಣ್ಗಳಿಂಗೊತ್ತುತ್ತೆ ಸಂತಸದಿ ಕ್ಷಣಕಾಲ ಮೌನಮಂ ತಾಳುತ್ತೆ ಮತ್ತೇನನೋ ಯೋಚಿಸುತೆ ಋತುಪರ್ಣನೊಳ್ ಸೂಚಿಸಲ್ ಕೋಸಲೇಶಂ ನಳನ ವಾರ್ತೆಯಂ ಮತ್ತಾರಿಗುಂ ಪೇಳದಿರ್ ನೀನೆಂದು ಸೂತಗಾಣತಿಯಿತ್ತು ಮಾತೇರನೇರಿರಲ್ ಬಾಹುಕಂ ಹಾರಿಸಿದನಾ ರಥವನತ್ಯಂತ ವೇಗದಿಂದೆ.

ಕಮಲಾಪ್ತನನಿತರೊಳ್ ಪಶ್ಚಿಮಾಂಬುಧಿಗ್ಗಿಳಿದು ಮುಣುಗಿರ್ದೊಡಂ ನಳನ ಕೈಚಳಕದೊಳ್ ಕಗ್ಗತ್ತಲೆಯೊಳಾ ಗಹ್ವರದ ಮಾರ್ಗದೊಳ್ ಹಾರುತಿರ್ದುದು ರಥಂ ನಿಷಧೇಶ್ವರಂ ಮುನ್ನ ತಾಂ ಪಡೆದಿರ್ದ ಯಜ್ಞೇಶ್ವರನ ವರದ ನೆರವಿಂದೆ ಬಂದಿರ್ದ ಬೆಳಕಿನಿಂದೆ. ಹಗಲಿರುಳ ಬೇಧಮಂ ಗಣಿಸದಾ ವಾಜಿಗಳ್ ಸ್ಯಂದನವನೆಳೆದೆಳೆದು ಮುಂದೋಡುತಿರ್ದುವು ಭರದಿ ಮತ್ತಡಿಗಡಿಗೆ ನಳನೃಪಂ ವಾಘೆಯಂ ಜಗ್ಗುತ್ತೆ ಬೆನ್ನಮೇಲ್ ಕೈಯಾನಿಸಲ್ ಹುರುಪಿನೊಳ್ ಹಾರುತೋಡುತಲಿರ್ದುವಾ ಪ್ರಾಣಿಗಳ್ ಗರಿಗೆದರಿ ಗಗನಾಂಗಣದಿ ಪಾಯ್ದೋಡುವಾ ವಿಹಗತತಿಯಂತೆ ಮೇಣ್ ಮಾರುತನ ಹತಿಯಿಂದೆ ಹಾರುತೋಡುವ ನೀರದಂಗಳ ರಾಜಿಯಂತೆ. ಘಳಿಗೆಗಳ್ ಝಾವಗಳ್ ಕಳೆಕಳೆದು ಮುಂಜಾವಿನಾ ಮೂಡಣಭ್ರಂ ಚೆಂಬೊನ್ನತಗಡಿನೋಲ್ ಪಳಪಳನೆ ಹೊಳೆಯುತಿರೆ ಕರ್ಮಸಾಕ್ಷಿಯ ರಥಂ ಮತ್ತುದಯಗಿರಿ ಶಿಖರದಿಂ ಮೇಲೇರುತಿರ್ದಂತೆ ಕೋಸಲೇಶನ ತೇರುತಾಂ ಕುಂಡಿನಾಪುರದರಮನೆಯ ದುರ್ಗದ ಮಹಾದ್ವಾರದೊಳ್ ನಿಂದಿರ್ಪುದು.

ರಾಮಮಂದಿರದ ಸುಪ್ರಭಾತದ ಘೋಷತಾಂ ರಾಕೇಂದುಕುಲಪಾಲಕರ್ ಕರೆತಂದ ಸ್ಯಂದನದ ಕುದುರೆಗಳ ಕೊರಳ ಘಂಟೆಯ ನಿನಾದದೊಳ್ ಮೇಳೈಸಿ ನಿಲ್ಲುತಿರೆ ಚಂದ್ರಶಾಲೆಯೊಳಿರ್ದ ಸೂರ್ಯನುದಯಮಂ ನೋಡುತಿಹ ಭೀಷ್ಮಕಂ ಕಂಡನಾ ಕೋಸಲೇಶನ ಬರವತಾಂ ಕೌತುಕಂ ಪೆರ್ಚುತಿರಲು. ಸಾಕೇತಮಂ ಬಿಟ್ಟಿತ್ತ ಬಂದಿರ್ದ ಭೂವರನ ಬರದ ಕಾರಣಮನುಂ ಮೇಣ್ ತನ್ನಣುಗಿ ದಮಯಂತಿ ಹೂಡಿರ್ದ ಹಂಚಿಕೆಯ ಹೊಲಬನುಂ ತಿಳಿಯದೇನೇನೋ ಯೋಚಿಸುತೆ ಭೀಷ್ಮಕಂ ತಾಳಿದಚ್ಚರಿಯ ತಳಮಳದಿ ಚಡಪಡಿಸಿ ಪರಿವಾರಮಂ ಕೂಡುತ್ತೆ ಋತು

ಪರ್ಣನಂ ಕಂಡು ಕುಶಲಮಂ ಬೆಸಗೊಂಡು ಮನ್ನಣೆಯೊಳಾದರಿಸಿ
ತನ್ನಾಪ್ತ ದೂತರಂ ಕರೆದಿತ್ತು ಸ್ವಗೃಹಕೆ ಸರಿಯಾದ ಬೇರೊಂದು ಮಂ
ದಿರದಿ ಬೀಡಾರಮಂ ಕಲ್ಪಿಸುತೆ ಕಳುಹಿಸಿದನು.

ಮುಂಜಾವಿನೊಳ್ ಮಿಂದು ಮಡಿಯುಟ್ಟು ಶಿವನನರ್ಚಿಸಲ್
ನಡೆದಿರ್ದ ಸುದತಿಯಹಾ ದಮಯಂತಿ ತಾಂ ಚಂದ್ರಚೂಡಗೆ ನಮಿಸಿ
ಪ್ರಾರ್ಥಿಸುತೆ ಪತಿಭಿಕ್ಷೆಯಂ ಬೇಡಿ ವಿರಹದುರಿ ದವ್ವಾಳಿಸಲ್ ಕರಿಕಿ
ಕುಂಟಿತವಾದ ಕನಕಲತೆಯಂ ಪೋಲ್ದು ಬಳಿಯ ಕೆಳದಿಯ ನೆರವಿನಿಂ
ನಡೆದು ಮರಳುತಿರೆ ದೂರದೊಳ್ ನಿಂದು ತನ್ನ ಬಾಳಂ ನೆನೆದು ಮರು
ಗುತಿರ್ದಾ ನಳಂ ಕಂಡನಾಕ್ಷಣ ತನ್ನವಲ್ಲಭೆಯನು.

ಕಾಸಾರದಿಂ ಕಿತ್ತೆಸೆಯೆ ಮಾರ್ತಾಂಡನುರುಬೆಯಿಂ ಕಳೆಗುಂದಿ
ಬಾಡಿರ್ದಮಲಕಮಲಮಂ ತಪ್ತ ಜಲದೊಳಗದ್ದಿ ತೆಗೆದಂತೆ ದುಃಖಾಶ್ರು
ಕಣಗಳಲ್ಲಲ್ಲಿ ಸಿಡಿದ ಮುತ್ತಂಪೋಲ್ತು ಮೊಗದ ಮೇಲ್ ಕಾಣುತಿರೆ
ವ್ಯಾಕುಲಾಕುಲಿತಮಾನಸೆಯಾಗಿ ದೀನತೆಯ ಸರ್ವಸ್ವಮಂ ಪಡೆದು
ಬಳಲಿಬಳ್ಕುತೆ ನಡೆಯುತಿರ್ದಳು ಸುದತಿತಾಂ ಶಿವನನರ್ಚಿಸಿ ಬೇಡಿ
ಪಡೆದು ಮುಡಿದಿರ್ದ ಮಲ್ಲಿಗೆಯ ಕಿರುಝಲ್ಲಿ ಬಿಚ್ಚಿ ಬಿದ್ದಿರ್ದ ಬೆನ್ನ
ಮೇಲಿನ ಕಬರಿಯೊಳ್ ನಿರ್ಧಾರಮಿಲ್ಲದ ಮನದ ತೆರದಿಂದೆ ಅತ್ತಿತ್ತ
ತೂಗುತಿರಲು.

ನೋಡಿದಾಗಲೆ ಮಡದಿಯಂ ಕಣ್ಣಿನೊಳ್ ನೀರೂರೆ ನೋಡಲಾ
ಗದೆ ನೃಪೋತ್ತಮಂ ಮನಸಿನನುತಾಪದಿಂ ಚೈತನ್ಯಮುಡುಗಿರಲ್ ಕುಸಿ
ದುಬೀಳುತ್ತೆ ಚೇಳ್‌ಗಚ್ಚಿದಂತಾಗಲಡಿಗಡಿಗೆ ಕೈಕಾಲ್ಗಳಂ ಕೊಡಹಿ
ನರಳುತ್ತೆ ತನ್ನಾಕೆಯಂ ಮೇಣವಳ ದೀನತೆಯನಂತೆಯೇ ಕೊರಗಿ
ಸೊರಗಿರ್ದಮಲತರ ರೂಪಮಂ ಕಂಡು ಕಾತರಿಸಿ ಸೌಭಾಗ್ಯದೈಸಿರಿಯ
ಸಕಲ ಸದ್ಗುಣಗಣಗಳಂ ನೆನೆನೆನೆದು ಮರುಗುತಿರ್ದಂ ಮಾನಿನಿಗೆ ತಾಂ
ಮಾರಿಯಂತಾದೆನೆಂದು.

ತಾಳಲಾರದೆ ದುಗುಡದತಿತಾಪಮಂ ಮರುಮರುಗಿ ಭೂವರೇಣ್ಯಂ
ಮೇಲೆದ್ದು ತನ್ನಿರಕೆ ತಾನೆ ಸಿಡುಕುತ್ತೆ ಹಳಿಯುತ್ತೆ ಮೇಣ್ ಸುಯ್ವುತ್ತೆ
ಬೀಡಾರದತ್ತತ್ತ ತಾಂ ನಡೆದಿರಲ್ಕತ್ತಲಾ ದಮಯಂತಿ ತಾಂ ತಿಳಿಯದೇ

ನಂಮುಂದೆ ತನ್ನರಸತಾಂ ಬಂದಪನೆ? ಬಾರದಿರ್ದಪನೆ? ಗುಟ್ಟಿನೊಳ್
ಗೈದಿರ್ದ ಯತ್ನಮೇಂ ಫಲವತಂದಪುದೋ? ಹಾ ಯೆಂದು ಹಮ್ಮೈಸಿ
ತನ್ನವ್ವೆಯಂ ಬಳಿಸಾರಿ ನಿಂದಿರಲ್ ಪರ್ಣಾದ ತಾಂ ಬಂದೊರೆದನಾ
ಕೋಸಲೇಶನ ಜತೆಗೆ ಸೂತನಾಗಿಯೆ ಬಾಹುಕಂ ಬಂದಿರ್ಪನೆಂದು ಭೂ
ಸುರಂ ಬಂದೊರೆದ ಸಂತಸದ ವಾರ್ತೆಯಂ ಕೇಳಿದಾಕ್ಷಣ ಸುದತಿ ತಾಂ
ತೋಡುತಿಹ ಬಾವಿಯೊಳ್ ಜಲವಕಂಡಂತೆ ಹರ್ಷಿಸುತೆ ಮತ್ತಡಿಗಡಿಗೆ
ತಾಂ ಕೇಳಿ ತಿಳಿದಿರ್ದ ಬಾಹುಕನ ರೂಪದೊಳ್ ಸಂದೆಯಂ ಕಂಡಿ
ರ್ದೊಡಂ ಮುಗಿಲ ಮರೆಯಿಂ ತೂರಿಬಹ ಜ್ಯೋತ್ಸ್ನದಿಂ ಚಂದಿರನ ಕಳೆಯು
ತಾಂ ತಿಳಿವತೆರದಿಂದೆ ಸಾಕೇತದಿಂ ತೇರೈಸಿ ನಡೆತಂದ ಸೂತನತಿಶಯದ
ಸಾಹಸದ ಜಾಣ್ಮೆಯಂ ನೆನೆನೆನೆದು ಮೊದಲಮುಳೆಯಾಗಿಳೆಯ ಮೇಲ್
ವೊಳೆತ ಹುಲ್ಲಂ ಪೋಲ್ದು ಚಿಗುರಿದಾಸೆಯ ಮುಖದಿ ಮಹದೇವನಂ
ಪ್ರಾರ್ಥಿಸುತೆ ಮಾತೆಯೊಳ್ ಮಾತಾಡಿ ಪರ್ಣಾದನಿಂಗೊರೆದು ಕೈಮು
ಗಿದು ಬೀಳ್ಕೊಟ್ಟು ಬಾಲ್ಯದೊಳ್ ಜತೆಯಾಗಿ ಬೆಳೆದಿರ್ದ ಕೆಳದಿಕೇಶಿನಿ
ದಾದಿಯಂ ಕರೆದೊರೆದು ಮತ್ತವಳನೆರವಿನಿಂ ತೊಡಗಿದಳ್ ಕಾರ್ಯಮಂ
ಮಹಾಸತಿಯ ನಿಜವರಿತು ರಮಣನಂ ಶೀಘ್ರದೊಳ್ ಪಡೆವೆನೆಂದು.

ನಿಷಧೇಂದ್ರನರಸಿಯಿಂದಾಣತಿಯನಾಂತಿರ್ದ ಪರ್ಣಾದ ತಾಂ ತವಕದೊಳ್ ಪೊರಡುತೈತಂದು ಕೋಸಲೇಶನ ಬಿಡದಿಯೋಳ್ ಭೀಷ್ಮಕಂ ನೇಮಿಸಿದ ಸತ್ಕಾರಕರ್ತನಂ ಕರೆದೊರೆದು ಗುಟ್ಟಿನೊಳ್ ಕೆಲಕಟ್ಟಿ ತಾನೆ ನಿಂದಲ್ಲಿ ಭೂಪಾಲರಾರೋಗಣೆಗೆ ಸರಿಯಾಗಿ ಸಕಲ ಸಂಭಾರ ಸಾಧನಂಗಳನ್ನೆಲ್ಲಮಂ ಪೂರೈಸಿ ವಹ್ನಿ ವಾರಿಗಳೆರಡರಂ ಕರು ಣಿಸದೆ ಪಿಸುಣನೋಲ್ ಕಾರ್ಯದವಸರವನಟಸುತ್ತ ಅತ್ತಿತ್ತ ಸುತ್ತು ತಿರ್ದಂ ಭೋಜನಕೆ ಮುಂದಾವ ಹದನಮಂಗೈದಪರೋ? ನೋಳ್ಪೆನೆಂ ದೊಳಗೊಳಗೆ ಹೊಂಚುತಿರ್ದಂ ವಂಚಕಂ ಮುಂದಿಯೊಳ್ ಬೆರೆವತೆರದಿ.

ಸಾಕೇತಕಟ್ಟೆರ್ದ ವೈವಾಹದೋಲೆಯೊಳ್ ಬರೆಸಿರ್ದ ಭಾವಮಂ ಬಗೆಗೊಂಡು ಬೇಗದೊಳ್ ಕುಂಡಿನಾಪುರಕಿತ್ತ ಋತುಪರ್ಣನಂ ಕೂಡಿ ತೇರೈಸಿ ನಡೆತಂದ ಸಾರಥಿಯ ಜಾಣ್ಮೆಯೊಳ್ ತನ್ನರಸನಾನಳನ ಸಾಹ ಸವೆ ಕಂಡಿರ್ದೊಡಂ ಸಾಧ್ವಿಯುರಮೌಳಿ ತಾಂ ತಣ್ಣೀರತಣಿಸಿ ಕುಡಿವಂದ

ದಲಿ ಬಾಹುಕನ ಪರಿಕಿಸಲ್ ಮೋಹೆಯನ್ನೇರ್ದು ಶಿವಗುಡಿಯ ಮಾರ್ಗ ದೊಳ್ ಪಯಣಮಂ ಹೂಡಿರ್ದಳು.

ನೈಷಧದ ಸುಖಸಿರಿಯ ಸ್ವರ್ಗಮಂ ತೊರೆದ ಮೇಲಲ್ಲಿಯುಂ ಪಲ್ಲ ಕಿಯನೇರದಾಪದಪಲ್ಲವೆಯು ಪತಿದೇವನ ಜ್ಞಾನಮಂ ಪರಿಕಿಪಾತುರ ದಿಂದೆ ತನ್ನನ್ವೆಯಂ ಕೂಡಿ ಮೇಣೆಯೊಳ್ ಕುಳ್ಳಿರ್ದೊಡಂ ಬಡತನಂ ಬಂದಡಸಿ ದಾಸ್ಯದೊಳ್ ತನುವ ತೇದುವ ರಮಣನರ್ಧಾಂಗಿತಾಂ ಸಿರಿ ತನದ ಯಾನದೊಳ್ ಸಿಲುಕಿ ಮುಳ್ಳಮೊನೆ ಹಾಸಿನೋಳ್ ಮಲಗಿಸಿದ ರೋಗಿಯೋಲ್ ದಮಯಂತಿ ತಾಂ ತನ್ನರಸನಂ ನೆನೆನೆನೆದು ತನುಮನಂ ಗಳು ನೋಯುತಿರೆ "ಕಾಂತನಂಕಂಡಪೆನೋ? ಕಾಣದಿರ್ದಪೆನೋ? ಮತ್ತವನ ಮೊಗಸಿರಿಯ ಸೌಂದರ್ಯಮಂಪೀರ್ದು ಚರಣದೊಳ್ ಮೈ ಯಿಕ್ಕಿ ನಲಿನಲಿದು ತನುವನಪ್ಪುವ ಭಾಗ್ಯಮಂ ಪಡೆದಪೆನೋ? ಮೇಣ್ ಪಡೆಯದಿರ್ದಪೆನೋ? ಹಾ! ವಿಧಿಯೇ ಹಾ! ನಿನ್ನ ಚಿತ್ತವದೆಂತೋ ಬಲ್ಲವರದಾರೆಂದು ಚಿಂತಿಸುತೆ ಪಂಜರದ ಕೀರದಂತಡಿಗಡಿಗೆ ದೃಷ್ಟಿಯಂ ಬೀರಿ ಬಾಹುಕನನೋಳ್ಪೆನೆಂದೊಳಗೊಳಗೆ ತವಕಿಸುತೆ ಸಂಕೇತಮಂ ಕಾಯುತಿರಲನ್ನೆಗಂ ಕೋಸಲೇಶನಬಿಡದಿಗಿದಿರಾಗಿ ಬರುತಿರ್ದುದಾಮೇಣೆ ತಾಂ ಧ್ಯಾನಸ್ಥನುಸಿರಾಟದೋಲ್ ಕಟ್ಟಿನಿಲ್ಲಿಸಿದ ನೀರಿನೊಳ್ ಹುಟ್ಟು ಹಾಕದೆ ಹಗಿಯಬಿಟ್ಟಿರ್ದ ಹರಿಗೋಲಿನಂತಲ್ಲಿ ಮೆಲ್ನಡೆಯ ದಾಸಿಯರ ಬಳಸಿನಿಂದೆ.

ಅನಿತರೊಳ್ ದೇವಮಂದಿರದಿಂದೆ ಪ್ರಸಾದಮಂ ತಂದಿರ್ಪ ಕೊ ಳ್ಳೆಂದು ಮಾರ್ಗದಿಂ ಪರ್ಣಾದ ತಾಂ ಬಾಹುಕನ ಹೆಸರೆತ್ತಿ ಕರೆಯುತಿರೆ ಬಿಡದಿಯಿಂ ಬಂದು ವಂದಿಸುತೆ ಕೈನೀಡಿ ಪುಷ್ಪಾಕ್ಷತೆಯ ನಯನಭೀಕರ ರೂಪಮಂ ಕಂಡಳಾಸುದತಿ ತಾಂ ಕುಳಿತಲ್ಲೆ ಕೇಶಿನಿಯು ತೆರೆಯೆತ್ತಿ ಬೆಟ್ಟಿಟ್ಟು ತೋರಿಸಲ್ಕೆ.

ಮಹದಾಸೆಯೊಳ್ ತನುಮರೆದು ಪುಳಕೋದ್ಗಮದಿ ಸವಿಕನಸ ಕಾಣುತಿರೆ ಕೊಡತಿಯೊಳ್ ಬಡಿದು ನಡುನೆತ್ತಿಯಂ ಭೇದಿಸಿದ ನನಸಿ ನೋಲ್ ಹಿಮಗಿರಿಯ ಶಿಖರಮನ್ನೇರುತಿರೆ ನೀರ್ಗಟ್ಟಿದಾರಿಯಂ ಮುಚ್ಚಿ ಠಲ್ ಕಲ್ಲೆಡವಿ ಕಾಲ್ಜಾರಿ ಮೈಯ್ಯುಲುಗಿ ಪಾತಾಳಪ್ರಪಾತದೊಳ್

ದಿಂಡುರುಳಿ ಬಿದ್ದಂತೆ ಗಿರ್ರೆಂದು ಕಣ್ಣಾಲಿಗಳ್ ತಿರುತಿರುಗಿ ಕತ್ತಲೆ ಗೊಂಡು ಮೈನಡುಗಿ ಬಿಳ್ಪೇರಿ ಬೆವತಿತಾ ಸತಿಗೆ ಸರ್ವೇಂದ್ರಿಯಂ ಗಳು ಸೊರಗಿ ತುಟಿಯೊಣಗಿ ನೋಳ್ಪಳೆಂತಾಕಾಂತೆ ತಾಂ. ತನ್ನೆಣಿಕೆ ಯೊಳ್ ನಿಲುಕದಿಹ ರೂಪಮಂ ಕಂಡು ಕಂಡೊಡನೆ ಹೃದಯಮಂ ಬಿರಿಯಿಸುವ ಭೀತಿಯಂ ಬೀರುತಿಹ ಭೂತದೊಲ್ ಬಾಹುಕಂ ಕಾಣು ತಿರೆ ಕಂಗೆಟ್ಟು ಕಳವಳಕೆ ತುತ್ತಾದಳಾ ತರುಣಿ ತಾಂ ಬಿರುಗಾಳಿ ಬಿರು ಸಿನಿಂ ಬೀಸಲ್ಕೆ ಕಡಲ ನಡುವಣ ನಾವೆಯಂ ನಡೆಸುತಿಹ ನಾವಿಕನ ತೆರದಿ.

ವೈಶಾಖ ದುರಿಬಿಸಿಲಬೇಗೆಯೊಳ್ ಬಳಲಿ ಬಾಯಾರಿ ಬಾವಿಯಂ ಬಳಿಸಾರಿ ನೀರನೆತ್ತುವ ತವಕದೊಳ್ ದಂಡಿಮುರಿದಿಳೆಗುರುಳಿ ನೊಂದಿದ್ದ ವೃದ್ಧೆಯೊಲ್ ನಡನಡುಗಿ, ನಡೆಯುವಾತುರದಿಂದೆ ಮುಂದೈದಿ ನಡು ದಾರಿಯೊಳ್ ಕುಸಿದುಬಿದ್ದಿರ್ದ ಬಾಲೆಯಂತಳುತಳುತೆ ದಮಯಂತಿ ತಾಂ ಹಾ ಪತಿಯೆ ನಿಷಧಭೂಪತಿಯೆ ಹಾ! ಯೆಂದು ತನ್ನರಸನೆಲ್ಲಿರ್ಪ ನೆಂತಿ ರ್ಪನೆಂದಡಿಗಡಿಗೆ ನಲ್ಲನಂ ನಿಜಾತ್ಮವಲ್ಲಭನನಾನಳನ ತೋರೆನಗೆ ತೋ ರೆಂದು ಮೇಣೆಯೊಳ್ ಕುಳ್ಳಿರ್ದಕೆಳದಿಯರ ಕೈವಿಡಿದು ಕೇಳುತ್ತೆ ತಾಳ ಲಾರದ ದುಗುಡದಿಂ ತನ್ನವ್ವೆಯಂಕದೊಳ್ ಮೊಗವಿಟ್ಟು ರೋದಿಸುತೆ ಶಿಶುವನೋಡಲುನಡೆದು ಪ್ರೇತವನಭೂತಮಂ ಕಂಡಂಜಿ ಮೂರ್ಛೆಗೊಂ ಡಂತೆ ವೈಮರಿಯೆ ಮೇಣೆ ತಾಂ ತಿರುಗಿತಾರಾಜಮಂದಿರದ ಕಡೆಗೆ.

ನೀರುಬೆಂಕಿಗಳೆರಡರಂ ಪಡೆಯದೆಯೆ ಬಾಹುಕಂ ಬಹುವಿಧದ ಪಾಕಂಗಳ ಗೈದೊಡನೆ ಸಾಕೇತನಾಥನಂ ಕರೆದು ತರೆ ಭೋಜನಕೆ ಮತ್ತಿ ವನ ಪೆಗಲಿನೊಳ್ ಕೈಯಸೇರಿಸುತಾತ ಸುಸ್ನೇಹದೊಳ್ ತನ್ನೊಡನೆ ಜತೆ ಯಾಗಿ ನೀನುಂಡು ಮನದಬಯಕೆಯ ಸಲಿಸಿ ಮನ್ಮನಕೆ ಸಂತಸವ ಬೀ ರೆಂದು ಬೇಡುತಿರೆ ಬಳಿಯೊಳೇ ಕುಳ್ಳಿರ್ದು ನಿಷಧೇಶ್ವರಂ ಭುಂಜಿಸಿದನಾ ಕೋಸಲೇಶಂ ನಳನಪಾಕವ ಸವಿದು ಭಳಿಭಳಿರೆ ಭಾಪೆಂದು ಕೊಂಡಾಡಿ ಪೊಗಳುತಿರಲು.

ಬೆಂಕಿನೀರ್ಗಳನೆಲ್ಲಿಯುಂ ಕೊಳ್ಳದೆಯೆ ರಸದೂಟದಡುಗೆಯಂ ನಿರ್ಮಿಸಿದ ಬಾಹುಕಂ ಋತುಪರ್ಣನೊಡಗೂಡಿ ಭೋಜನವಗೈದಿರ್ದ

ಪೊಸಪರಿಯವಾರ್ತೆಯಂ ಪರ್ಣಾದ ನೋಡುತೋಡುತೆ ಪೇಳ್ದನಾ ನಳ ನೃಪನ ರಾಣಿಯೊಳ್ ಕೌತುಕದಿ ಮತ್ತಾಕೆ ಬಾನಬೊಬ್ಬೆಯನಾಲಿಸುತೆ ಕಿವಿಗಳಂ ನಿಮಿರಿಸುವ ಪೊಸಗರಿಯಕೇಶಿಯೋಲ್ ವಿವರಮಂ ಕೇಳು ತಿರಲು.

ಸವಿನುಡಿಯ ಮಧುವೀಂಟಿ ಮನದೊಳಾನಂದಮಂಕುರಿಸೆ ಸಂಶ ಯಕೆ ಮುಡಿಪಾಗೆ ಬಾಹುಕನರೂಪತಾಂ ತಡೆಯುತಿರೆ ನೆಲದಡಿಯ ಜಲಕಣದ ಬಲದಿಂದ ಪುಟ್ಟಿರ್ದ ಪೊಳಕೆಯಂ ಬಿಸಿಲಿನುರಿಬಾಡಿಸಿದ ತೆರದಿಂದೆ ಭೀಷ್ಮಕನ ಮಗಳ ಮನದೊಳಗೆ ಮೂಡಿರ್ದ ಭಾವತಾಂ ತೃಣವಾಗಿ ಬೇರಿನೊಳೆ ಜೀವನಂ ಪಿಡಿದು ನಿಂದಿರ್ದುದೆನೆ ಮೇದಿನಿಯ ಮೇಲಶ್ವಹೃದಯದ ಜಾಣ್ಮೆಯಂ ಮೇಣ್ ವರುಣಾಗ್ನಿದೇವರ್ಕಳೊಲು ಮೆಯಂ ಪಡೆದಿರ್ದ ಕೌಳಿತದ ಲಿಖಿತಾರ್ಥಮಂ ಗೊಂಡು ತಳುವದೊಂ ದೇ ದಿನದಿ ಸಾಕೇತದಿಂ ಬಂದು ನಿಂದಿರ್ದ ವೀರವರಬಾಹುಕನು ಮೊದ ಲೊರ್ಮೆ ಕೋಸಲದಿ ಪರ್ಣಾದನೊಳ್ "ಸ್ವಸ್ತ್ರೀಯ ಸೆರಗಹರಿದವ ರುಂಟು ಜೂಜುಗಾರನನರಿಯೆಯಾ"? ನೀನೆಂದು ಮರುಮಾತನುಡಿದಿರ್ದ ಮೇಲೇನು ಮನುಕುಲೇಶನ ಜತೆಗೆ ಕುಳ್ಳಿರ್ದು ಸಹಪಂಕ್ತಿಭೋಜನದಿ ಭುಂಜಿಸಿದ ಸದಮಲಂ ಛದ್ಮವೇಷದ ನಳನೃಪಂ ತಾನಲ್ಲದಿನ್ನಾರು ಮಲ್ಲೆಂದು ಮೆಲ್ಲಮೆಲ್ಲನೆ ಧೈರ್ಯಸಿರಿ ಸೇರಿತಾವೈದರ್ಭಿಯೊಡಲಿನಲ್ಲಿ.

ಶುಭ್ರಾಭ್ರಮಂಡಲದಿ ತಾರೆಗಳ್ ಮಿನುಗುತಿರ್ದಂತೆ ಧರಾತಳದೊ ಳಭ್ರಕಂ ಪಳಪಳನೆ ಹೊಳೆಯುತಿರೆ ಮತ್ತಲ್ಲೆ ಭೂಗರ್ಭದಾಳದೊಳ್ ಬೆಳೆದಪುದು ವಜ್ರಮೆಂದರಿದು ಬೆಟ್ಟದಾಕಿಬ್ಬಿಯೊಳ್ ಬೆಳೆದಿರ್ದ ಹಸಿರು ಹುಲ್ಲಂ ಕಂಡು ಬೇಸಗೆಯ ಬಿಸಿಲಿನುರಿ ಬೇಗೆಯೊಳ್ ಹಸಿದೇಳದಾ ಹಸುವು ತಾಂ ತವಕಿಸುವತೆರದಿಂದೆ ಆಜ್ಯಾಹುತಿಯೊಳುರಿದೆದ್ದು ಮೇಲ್ವಾ ಯ್ದು ನೆಗೆಯುತಿಹ ಯಜ್ಞಾಗ್ನಿಜ್ವಾಲೆಯಂತಡಿಗಡಿಗೆ ನೆಗೆದೇಳ್ವ ಬರಿ ವೈಯ್ಯ ಭಾರದೊಡಲಂ ಹೊರೆಯಲಾರದ ಭವಣೆಯೊಳ್ ತಿರುತಿರುಗಿ ಮಡದಿಮಕ್ಕಳಗೊಂಡು ದೇಶಾಂತರಕೆ ಯಾತ್ರೆಯಂ ಬೆಳಸಿರಲ್ ಮಾರ್ಗ ದೊಳ್ ಹೊನ್ನಸಿರಿ ರಾಶಿಯಂ ಕಂಡೊಡನೆ ಕುದುರಿರ್ದ ಬಡವನಾಸೆಯ ಪೋಲ್ದು ಬಗೆಗೊಂಡ ಬಯಕೆಯಂ ಪೂರೈಪಬಗೆಗಾಗಿ ಅದ್ಭುತದ ಕಾರ್ಯ

ದೊಳ್ ಕೈಯ್ಯನಿಕ್ಕಿದ ತಜ್ಞಸಂಶೋಧಕಂ ಸಾಹಸವ ತೊಡಗಿದೊಲ್ ನಿಷಧೇಂದ್ರನರ್ಥಾಂಗಿ ತಾಂ ವಣ್ಣನೆತ್ತುತೆ ಕಳೆಕಳೆದು ಕುಣಿಯುತೋಡುತೆ ಮುಂದೆ ಖನಿಜಮಂ ಪಡೆವಂತೆ ತನ್ನರಸನಂ ಪಡೆದಪೆಂ ತಾನೆಂದು ಸಾಹಸಕೆ ಕೈಗೊಟ್ಟಳಾ ಸಾಧ್ವಿ ತಾಂ ಸಾಧಿಸುವ ಯೋಗದೊಳೆ ಸಿದ್ಧಿಯನ್ನೊಂದುವತಿಶಯದ ಧೃತಿಯಿಂದೆ ಕೂಡಿರ್ದ ಯೋಗಿನಿಯು ತೆರದಿ.

ಸಾರತರದಡುಗೆಯಂ ಕೆಳೆಯನೊತ್ತಿನೊಳಿದ್ದು ಭುಂಜಿಸುತೆ ಮನುಕುಲೋತ್ತಂಸ ತಾಂ ವಿಶ್ರಾಂತಿಯಂ ಕೈಗೊಂಡು ಪವಡಿಸಲ್ ಬಾಹುಕಂ ರಾಜಬೀದಿಯ ಕಡೆಗೆ ಮೊಗಮಾಡಿ ಹೊರಹಜಾರದಿ ಮಂಡಿಸುತೆ ಕೂಗುತಿರ್ದಂ ಮನವನಾ ನೆನಹಿನುಯ್ಯಾಲೆಯೊಳ್ ರುಗ್ಣಶಯ್ಯೆಯ ಬಾಲನಂ ತೆಗೆದು ತೊಟ್ಟಿಲೊಳಿಟ್ಟು ತಾಯ್ ತನ್ನ ಮಾತ ಸಂಕಟದಿಂದೆ ಮನೆಯ ದೈವವ ನೆನೆನೆನೆದು ತೂಗಿದೊಲ್ ಕಾಲಮಂ ಕಾದುಕಾದು.

ಕಾರಿರುಳ ಕತ್ತಲಲಿ ನೂರಾರು ಮಿಂಚುಗಳ್ ಜತೆಯಾಗಿ ಮಿಂಚುತಾಕ್ಷಣದಿ ಮುಚ್ಚಿರ್ದ ಕಣ್ಣಕೋರೈಪ ತೆರದಿಂದೆ ಪೊಸಬೆಳಕು ತಾನೊಂದು ಬಾಹುಕನ ನಯನಮಂ ಪೊಕ್ಕು ಮತ್ತವನ ಹೃದಯಮಂ ಬೆಳಗಿರ್ದುದೆನೆ ಥಳಥಳನೆ ಹೊಳೆಯುತಿಹ ಮೊಗಸಿರಿಯ ತೇಜದಿಂ ಕಂಡವರ ಕಣ್ಮನಂಗಳಂ ಸೆಳೆಸೆಳೆದು ಸೂರೆಗೊಂಬತಿಶಯದ ರೂಪಿನಿಂ ಚೆಲ್ವಾಗಿ ನಿರಾಭರಣ ಸೌಂದರ್ಯದಿಂ ಕಳೆಗೊಂಡು ಕಿರುನಗೆಯ ಕುಡಿನೋಟದಿಂ ನೋಳ್ಪವರ ಮನಕೆಲ್ಲ ಸಂತಸವ ಬೀರುತ್ತೆ ಮುದ್ದಾದ ತಾವರೆಯ ಮೊಗಗಳಂ ಮೇಲೆತ್ತಿ ಕಿರುನಾಸಿಕದ ಚಂಪಕಂಗಳನರಳಿಸುತೆ ಎಳೆದಳಿರ ಪಾದಂಗಳಂ ನೆಲಕೂರಿ ಜತೆಯಿಂದೆ ಬಾಲಬಾಲೆಯರಿರ್ವರಾ ರಾಜ ಬೀದಿಯೊಳಲ್ಲೆ ಮೆಲ್ಲಮೆಲ್ಲನೆ ನಡೆದು ಪಿಂದಸೆಗೆ ನೋಡನೋಡುತೆ ಮುಂದೆ ತನ್ನ ಕಡೆಗಿದಿರಾಗಿ ಬರುತಿರಲ್ ಕಂಡರಿದನಾ ಬಾಹುಕಂ ವಿಸ್ಮಯಾನಂದಗಳ್ ಕೂಡಿ ಬರಲು.

ಮಕ್ಕಳಂ ಕಂಡೊಡನೆ ಭಟ್ಟನೇ ಚಿಗಿದೆದ್ದು ನಿಂದಲ್ಲೆ ಕಣ್ಣೆರಡರಂ ಹೊಸೆದು ಹಿಂಡುತ್ತೆ ಮತ್ತೊಮ್ಮೆ ನೋಡಿದಂ ತಪ್ಪಿದೆನೆ ತಾನೆಂಬ ಭಾವದೊಳ್ ಮೇಣ್ ಕನಸ ಕಂಡಪೆನೆಂಬ ಭ್ರಾಂತಿಯಿಂ ಮೈಯ್ಯನಲ್ಲಲ್ಲಿ ಚಿವುಟುತ್ತೆ ನೋಯುತಿರೆ ನಿಜವನರಿದಾ ಬಾಹುಕಂ ನೋಡುತಿರ್ದಂ

ಬಾಲ್ಯದೊಳ್ ತನಗಿರ್ದ ತನ್ನ ರೂಪದ ಸೊಬಗನಾ ಭಾವಚಿತ್ರದಿ ನೋಡಿ ತನ್ಮಯಂ ತಾನಪ್ಪ ವೃದ್ಧನೊಲ್ ಸಿರಿದೇವಿಯಾತಂಗದಿರ ರೂಪಮಂ ಕಿರಿದಾಗಿಸುತೆ ನಡೆತಂದ ತನ್ನಾತ್ಮ ಸಂಭವರನಾ ದಮಯಂತಿ ಪಡೆದಿರ್ದ ಮುದ್ದಿನಾ ಕಣ್ಮಣಿಗಳನ್ನು.

ವಾತ್ಸಲ್ಯ ಪರಿಪೂರ್ಣ ದೃಷ್ಟಿಯಂ ಬೀರುತಾ ಬಾಲರಂ ನೋಡುತಿರೆ ತಾಂ ಪಡೆದು ಕಳೆದಿರ್ದ ದುರ್ದಸೆಯ ನೋವುಗಳ್ ಬಿಡದೊಂದೊಂದೆ ಹೃದಯಮಂ ಬಡಿಬಡಿಯೆ ನೊಂದಿರ್ದ ಬಾಹುಕಂ ಮಕ್ಕಳಂ ಕೈಯೊಳಾದರು ಮುಟ್ಟಿ ಮುದ್ದಾಡಿ ತನ್ನೆದೆಯ ಭಾರಮಂ ಕಳೆದಪುದೆ ಮೇಲೆಂದು ಕೈಯೆತ್ತಿ ಸನ್ನೆಯಿಂ ತನ್ನೆಡೆಗೆ ಕರೆಕರೆದು ಬಾರದಿರೆ ತನ್ನ ರೂಪಕೆ ನಾನೆ 'ಛೀ'ಗಳೆದು ಪಾಕಮಂದಿರಕೈದಿ ಮತ್ತಲ್ಲಿ ಘಮಘಮಿಸ ಭಕ್ಷ್ಯಂಗಳಂ ಕೊಂಡೊಡನೆ ನಡೆತಂದು ದೂರದೊಳ ನಿಂದಿರ್ದ ತನ್ನ ಮಕ್ಕಳ ಕೈಗೆ ಕಾಣಿಕೆಯನಿತ್ತವರ ಸಮ್ಮಾನಿಸುತೆ ಮೃದುಮಧುರ ವಾಣಿಯೊಳ್ ಮಾತಾಡಿ ತನ್ನೆರಡು ಕೈಗಳಿಂದಿರ್ವರಂ ಪಿಡಿದಪ್ಪಿ ಮುಂಡಾಡಿ ಶಿರವನಾಘ್ರಾಣಿಸುತೆ ಮುದ್ದಾಡಿದಂ ಬಹು ವಿಧದಿ ತನ್ನಾಸೆ ಫಲಿಸಿತೆಂದು.

ಅನಿತರೊಳ್ ಯಾತ್ರೆಯಂ ಕೈಗೊಂಡು ನಡೆನಡೆದು ಸುಪವಿತ್ರ ಕ್ಷೇತ್ರಮಂ ಸೇರ್ದಲ್ಲಿ ವಿಪ್ರನೊರ್ವಂ ನದಿಯ ತೀರ್ಥದೊಳಿಳಿದು ಮಿಂಯುತಿರೆ ಪಾಪಿಗಳ ಪಾಪಪರಿಹಾರ ಕಾರ್ಯಮಂ ಕೈಗೊಂಡು ಪರಂಪರೆಯ ಬಳಿವಿಡಿದು ಬಂದಿರ್ದ ಕ್ಷೇತ್ರವಾಸಿಯ ದೂತ ತಾಂ ಕಂಡು ಗದರಿಸಿದ ತೆರದಿಂದೆ ಮಕ್ಕಳಂ ಪಿಡಿದಪ್ಪಿ ಬೋಳೈಪ ಬಾಹುಕನ ವರ್ತನಕೆ ಸಿಡಿಗೊಂಡು ಬೊಬ್ಬಿಟ್ಟು ಗದರಿಸುತೆ ಕೇಳಿದಳ್ ಕೇಶಿನಿಯು ಸುಸ್ವರೂಪದೊಳ್ ನೀನೇಕೆ ನವ್ಮೊಡತಿಯಾ ಮಕ್ಕಳಂ ಮುಟ್ಟಿರ್ಪೆಯೆಂದು.

ವಜ್ರಕಾಠಿಣ್ಯದಾ ನುಡಿಗಳಂ ಕುಸುಮಕೋಮಲೆಯಾಡುತಿರೆ ಕಿವಿಗಳೊಳ್ ಕಾದೆಣ್ಣೆಯಂ ಸುರಿದು ಕನಕಮಯದಾ ಸುರಗಿಯಿಂದೊಡಲ ನಿರಿದಂತೆ ಸಂಕಟವಾಗೆ ಬಾಹುಕಂ ನಸುಮುನಿಸಿನಾ ದುಃಖದೊಳ್ ನುಡಿದನಿಂತು. "ತನ್ನತನತಾಂ ಕಳೆಯುತೀ ಹೀನತೆಯ ಮಾತುಗಳ ಕೇಳ್ವಂತುಟಾ ವಿಧಿಯು ವಿಧಿಸಿರ್ಪನಿನ್ನೇನು? ತಪ್ಪಿದೆಂ ತಾಯೆ ನಾನಿನ್ನ

ಒಪ್ಪುಗೆಯ ಪಡೆಯದೀಬಾಲರಂ ಮುಟ್ಟಿದುದು ತಪ್ಪಾಯ್ತು, ಕ್ಷಮಿ ಸೆನ್ನ ದೂತಿ ನೀನಾದೊಡೇಂ? ತಾಯ್ತನಂ ನಿನ್ನೆದೆಯೊಳಂಕುರಿಸದಿರ್ದ ಪುದೆ? ಪೇಳೆನಗೆ. ಮಕ್ಕಳಿರ್ದರು ಮೊದಲೆನಗೆ ನಾಂ ಮುದ್ದಿಸುತೆ ನಿನ್ನ ರೇಗಿಸಿದ ನಿನ್ನೊಡತಿಯಾ ಮಕ್ಕಳನೆ ಪೋಲ್ವು ದೇಹ ಭಾರದ ಬಡ ವನಾಂ ಪೂರ್ವಮಂ ನೆನೆನೆನೆದು ಮಕ್ಕಳಂ ಕಂಡೊಡನೆ ಪಿಡಿದೆತ್ತಿ ಮುದ್ದಿ ಸಿದೆ ನಾಂ ಹೃದಯದೊಳ್ ಚಿಮ್ಮಿರ್ದ ವಾತ್ಸಲ್ಯದಾ ಬುಗ್ಗೆ ಹೊನಲಾಗಿ ಹರಿಯುತಿರಲು.

ಇನಿತೆಲ್ಲ ಮಾತುಗಳ ಬಾಹುಕಂ ಪೇಳುತಿರೆ ಕೇಳುತಿರ್ದಾ ಕೇಶಿ ನಿಯು ತಾಂ ತಳುವದಾಕ್ಷಣ ಬಾಲರನ್ನೊಡಗೊಂಡು ಮುಂದೆಮುಂದೈದಿ ರಾಜಮಂದಿರದೊಳವರಂ ಬಿಟ್ಟಲ್ಲಿ ಮತ್ತವರ ಕೈಯ ತಿಂಡಿಯ ಶೇಷವಂ ಗೊಂಡು ನಳನರಸಿಯಂ ಬಳಿಸಾರಿ ಬಾಹುಕನ ಪಾಕದಾ ಭಕ್ಷ್ಯಮಂ ಮುಂದಿಟ್ಟು ಪೇಳ್ದಳಾ ವಿವರಮಂ ಸಾದ್ಯಂತಮಾಗಿ.

ಕೆಳದಿಯಾಡಿದ ಸವಿನುಡಿಯ ವೀಣೆಯಂ ಕೇಳಿ ಹರ್ಷಿತೆಯಾಗಿ ತನ್ನೆದೆಯ ತಂತಿಯಂ ಮಿಡಿದು ಧ್ವನಿಮಾಡಿ ಸಂತಸದೊಳಾಶಿವನ ಧ್ಯಾನಿ ಸುತೆ ದಮಯಂತಿ ತಾಂ ಈಶ್ವರಾರ್ಪಣಬುದ್ಧಿಯೊಳ್ ಪಾಕಶೇಷವ ಸವಿದು ಮಾನಸದೊಳಾಕ್ಷಣದಿ ಹಿಗ್ಗಿ ಹಿರಿಹಿರಿಯಾಗಿ ಕೆಳದಿಯಂ ಕೈಪಿ ಡಿದು ಕುಳ್ಳಿರಿಸಿ ತನ್ನೆದೆಯ ವಾಂಛಿತವನಾ ಮಾತಿನೊಳ್ ಸೂಚಿಸುತೆ ನುಡಿದಳಿಂತು.

ಮಕ್ಕಳಂ ಕಂಡೊಡನೆ ಓ ಕೆಳದಿ! ಕೈನೀಡಿ ಪಿಡಿದಪ್ಪಿ ಬಹುವಿಧದಿ ಮುದ್ದಾಡಿ ಲಲ್ಲೆಗೈದಾತ ತಾಂ ಬೇರಲ್ಲ ದಿಟಮಾಯ್ತು ಪಾಕವೈಶಿಷ್ಟ್ಯ ದೊಳ್ ಬಾಹುಕಂ ತಾನನ್ಯನೇನಲ್ಲ ಮತ್ತಾತನೇ ನಿಷಧೇಶನಾನಳನೆನ್ನ ನಲ್ಲ ಪಶುಪತಿಯ ಪೂಜಿಸುತೆ ಪತಿಭಕ್ತಿಯಂ ನಂಬಿ ಕೈಕೊಂಡ ಕಾರ್ಯ ದೊಳೆ ಕಾಂತನಂ ಕಂಡಪುದು ಸಾಧ್ಯಮಾಯ್ತಿಂದು ಓ ಸಖಿಯೇ ಗಿರಿ ರಾಜ ನಂದಿನಿಯ ಪೂರ್ಣಕಾರುಣ್ಯದಿಂ ಪತಿದೇವನಡಿಗಳಂ ಪೊಂದಿ ಸಂತತದ ಸೌಖ್ಯ ಸೌಭಾಗ್ಯಮಂ ಪಡೆಯುವಾಸೆಯ ಮುಖದಿ ಬೇಡುತಿಹೆ ನಾನಿನ್ನ ದಯಮಾಡು ಕೇಶಿನಿಯೆ! ಹೊತ್ತು ಹೋಗದ ಮುನ್ನ ನೀನೆನ್ನ ವಲ್ಲಭನನಾ ನಿಷಧೇಂದ್ರನಂ ಕರೆತಂದು ಮತ್ತವನ ಪಾದಪದ್ಮದ ರಜವ

ಶಾನೆನ್ನ ಮುಡಿಯೊಳಾನುವ ಭಾಗ್ಯಮಯು ಪುಣ್ಯಮಂ ನೀಡೆನಗೆ ಪರಶಾರುವಿೂ ವಿವರಮಂ ತಿಳಿಯುದಂತಡಿಗಡಿಗೆ ಬೇಕಾದ ಸಂಚುಗಳ ಹೂಡುಮತ್ತೆನ್ನ ಕಾಂತನೈತಂದೆನ್ನ ಕಾಂಬಂತೆ ಮಾಡು.

ನಳನೃಪಾಲನ ರಾಣಿಯಾಡಿರ್ದ ಬಿನ್ನಹದ ನುಡಿಗಳಂ ಕೇಳ್ದು ಮಹೋಲ್ಲಾಸದಿಂ ಕೇಶಿನಿಯು ಬಾಲ್ಯದಾ ಕೆಳೆತನದ ಕಾರಣದ ಸಲುಗೆಯಿಂ ಮತ್ತವಳ ಕೊರಳ ಬಿಗಿದಪ್ಪಿ "ಸುದತಿ ಕೇಳ್ ಚಂದ್ರಚೂಡನ ನಂಬಿ ಸುವ್ರತವ ಕೈಗೊಂಡು ಸುರಿದಿರ್ದ ನಿನ್ನ ಕಣ್ಣೀರ ಗಂಗೆಯೊಳ್ ಪೂರ್ವಕೃತಪಾಪಮಂ ತೊಳೆತೊಳೆದು ತೇಲಿ ಬಹನಾನೈಷಧಂ ಬೆದರದಿರು ನೀನೆಂದು ಧೈರ್ಯಮನ್ನೊರೆದು ನಂಬುಗೆಯಿತ್ತು ನಡೆದೊಡನೆ ಶೀಘ್ರದಿಂ ಪರ್ಣಾದನಂ ಕಂಡು ಮಾತಾಡಿ ತಳುವದಲ್ಲಿಂ ಮೇಲೆ ಬಳಿಕೆರಡು ದೂತಿಯರ ಜತೆಯಾಗಿ ಬಂದಳಾ ಬಾಹುಕನ ಬಳಿಗೆ.

ಮಕ್ಕಳಂ ಮುದ್ದಾಡಿ ದೂತಿಯೊಳ್ ಮಾತಾಡಿ ಮನದೊಳೇನೇನೋ ಭಾವಗಳ್ ಮೂಡುತಿರೆ ನೆಮ್ಮದಿಗೆ ಬಾರದಾ ಮಾನಸಿಕ ಭ್ರಾಂತಿಯೊಳ್ ಬಾಹುಕಂ ಬಾಂದಳವನಂತೆಯೇ ಭೂತಳವನಡಿಗಡಿಗೆ ನೋಡುತಿರ್ದಂ ವ್ಯಾವಹಾರಿಕ ಜಗವ ಮರೆತಂದು ಮನದೊಳಗೆ ಮತ್ತಾವುದೋ ನಾಕನರಕಂಗಳಂ ಕಟ್ಟಿ ಬಂದಿರ್ದ ಕೇಶಿನಿಯು ಸನಿಹದೊಳ್ ನಿಂದೆಲ್ಲಮಂ ನೋಡುತಿರಲು.

ಸೆರೆಮನೆಗೆ ನೂಕಿರ್ದ ನಿರ್ದೋಷಿಯೊಲ್ ತನ್ನ ಹೊಣೆಯೆಲ್ಲಮಂ ದೈವಕೊಪ್ಪಿಸುತೆ ವಿರಹ ವೈರಾಗ್ಯದೊಳ್ ಮೈಮರೆತು ಕುಳ್ಳಿರ್ದ ಬಾಹುಕನನರ್ತಿಯಿಂ ಕರೆಕರೆದು ಕೇಶಿನಿಯು "ಮಹಾರಾಜ್ಞಿಯಾಣತಿಯ ಪಾಲಿಸಲ್ ತಳುವದೀಕ್ಷಣವೆ ಪೊರಡೇಳು ನೀನೆಂ"ದು ಸಾರುತಿರಲಾಜ್ಞೆಯಂ ಮತ್ತಾವ ತಪ್ಪಿತಕೆ ಪೇಳೆಂದ ಬಾಹುಕನ ವ್ಯಗ್ರದಿಂ ದೃಷ್ಟಿಸುತೆ ಮಕ್ಕಳಂ ಮೈಮುಟ್ಟಿ ಮುದ್ದಿಸಿದ ಘೋರತರದಪರಾಧಮಿರ್ದುಂ ಕೇಳುವೆಯ 'ಛೀ' ಹೋಗು ನಡೆ ನಮ್ಮೊಡತಿಯಂ ಬೇಡು ಮನ್ನಿಪಳು ಏಳೆಂದು ಘರ್ಜಿಸಿದ ದೂತಿಯೊಳ್ ಮತ್ತೀತನೇನೋ ಪೇಳುತಿರೆ ಗದ್ದಲವದಾಯ್ತಲ್ಲಿ ಪರ್ಣಾದನೋಡಿಬಂದ.

ಭ್ರೂಭಂಗದೊಳಗೆಲ್ಲರಂ ಗದರಿಸುತೆ ಗಂಭೀರತೆಯೊಳಾ ಪರ್ಣಾದ

ತಾಂ ನೆಟ್ಟನೇ ನಡೆದೊಳಗೆ ಬಡದಿಯೊಳ್ ಹಾಯಾಗಿ ಮಲಗಿರ್ದ ಋತುಪರ್ಣನಂ ಕಂಡು ಗುಟ್ಟಿನೋಳ್ ಪೇಳ್ದನಿಂತು.

ರಾಜೇಂದ್ರಚಂದ್ರಮನೆ ನೀಂ ಮಾತನಾಲಿಪುದಿಂದು ನಮ್ಮರಸ ನಾಮಗಳು ನೀನರಿದತೆರದಿಂದೆ ಮರುಮದುವೆಯಾ ಮದುಮಗಳು ಮತ್ತಿನ್ನೆಲ್ಲಿಕಂಡಳೋ ಕಾಣೆ ರೂಪಗುಣಸಂಪನ್ನನಾ, ನಿಮ್ಮ ಬಾಹುಕನ ನಳನರಸಿ ಛಲವಿಡಿದು ನಿಂದಿರ್ಪಳಲ್ಲಿ ತಾನವನನೇ ಕೈವಿಡಿದು ವರಿಪೆನೆಂದು ರಾಜಾಜ್ಞೆಯಿಂ ಬಂದಿರ್ಪೆನಾಂ ನಿನಗಿದಂ ಸೂಚಿಸುತೆ ನಿನ್ನನುಪಮದ ದಯದಿಂದೆ ನಿನ್ನವನನಾ ಬಾಹುಕನ ಹೆದರಕೆ ಕರದೊಯ್ಯಲೆಂದು.

ಕೇಳ್ದೊಡನೆ ಖೊಳ್ಳೆಂದು ನಗುತಲಾ ಋತುಪರ್ಣ ತಾಂ ಮೂಡಿರ್ದ ಭಾವಂಗಳಂ ಹೃದಯದೊಳ್‌ಹುದುಗಿಟ್ಟು ಕಡೆಯಾಯ್ತು ನಳನ ಪರಿಭವಕೆಂದು ಮನದ ಸಂತೋಷದಿಂ ಪರ್ಣಾದನೊಳ್ ಸಮ್ಮತಿಯನಿತ್ತಾಕ್ಷಣವೆ ಮೇಲೆದ್ದು ಬಂದೊಡನೆ ಸಂಕೇತದೊಳ್ ಬಾಹುಕಂಗೆಲ್ಲವಂ ಸೂಚಿಸಿದನು.

ಕೇಶಿನಿಯ ಬೊಬ್ಬಾಟದೊಳ್ ಪರ್ಣಾದನಾಹ್ವಾನ ತಾಂ ಕೂಡುತಿರೆ ಬಾಹುಕಂ "ಕಂಡಿರ್ಪೆನೀ ಪಾರ್ವನಂ ಬೇಹಿನೊಳ್ ಕೋಸಲದಿ ಮೊಪಲೊರ್ಮೆ ಮತ್ತಿಂದು ಬೆಂಕಿನೀರ್ಗಳನಿಲ್ಲಿಬೇಕೆಂದು ತಪ್ಪಿಸುತೆ ಮಕ್ಕಳೀರ್ವರನಿತ್ತಲೀ ದಾಸಿಯಳ ಜತೆಯಾಗಿ ಕಳುಹಿಸುತೆ ಮೇಣ್ ಪರಿಪರಿಯ ವಿಧದಿಂದೆ ನನ್ನ ಪರಿಕಿಸುತೆ ನನ್ನಿರದಿ ನನ್ನಿಯನ್ನರಸಿ, ನನ್ನರಸಿ, ನನಗಾಗಿ ಕಳುಹಿರಲ್ ನನ್ನಿರವನರಿತು ಬಂದಿಹರಿವರು ತಪ್ಪಲ್ಲ ತಪ್ಪಲ್ಲಮೆಂದರಿದು ಮನದೊಳಗೆ ಪೂರ್ಣ ಭಕ್ತಿಯೊಳಭವನಂ ಪ್ರಾರ್ಥಿಸುತೆ ಕೈಮುಗಿದು, ಮೊಲೆಯನೂಡಿಸಿ ತಾಯಿತನ್ನಂಕಪರ್ಯಂಕದಿಂ ಕೆಳಗಿಳಿಸಿ ಕೈಬಿಡಲ್ ಬಾಲ ತಾಂ ತನ್ನಂಬೆಯಂ ನೋಡಿದೊಲ್, ದೂರದೊಳ್‌ನಿಂದು ಸನ್ನಿಹಿತಕಾಲಮಂ ಸನ್ನೆಯೊಳ್ ಸೂಚಿಸಿದ ಋತುಪರ್ಣನಂ ಮನದಣಿಯೆ ನೋಡುತ್ತೆ, ನಿಂದಿರ್ದನಲ್ಲಿ ತಾಂ ಪಹರಿಗಳ ಕಾಪಿನೊಳ್ ನಿಂದಿರ್ದ ಬಂದಿಯಂತೆ.

ಮಾಂತ್ರಿಕನ ಮುಂದಿರ್ದ ಉನ್ಮಾದಗ್ರಸ್ತರೋಲ್ ಪರ್ಣಾದಕೇಶಿನಿಯರಿರ್ವರುಂ"ಪೊರಗೇಳು ನಡೆಯೆಂದು ತಳುವದಂತೊತ್ತಾಯದಿಂ "ಬೇಗ ಬೇಗೆಂದು" ಮತ್ತುಮತ್ತವಸರವಗೊಳಿಸುತಿರೆ ಬಾಹುಕಂ ಸಕಲಸೌಭಾಗ್ಯ

ಸಂಪದದ ವಸನಂಗಳಂ ತುಂಬಿ ಕಟ್ಟಿರ್ದ ಕಿರುಗಂಟಿನಾ ಹೊರೆಯ ತಾಂ
ದಿವ್ಯತರ ಶರಕೋಟಿಯಿಂ ತುಂಬಿರ್ದ ತೂಣೀರಮಂ ಬಿಗಿವ ಬೆನ್ನಿಗೆ
ಬಿಗಿದು ನಿಷಧ ಸಾಮ್ರಾಜ್ಯದೊಡೆತನಕೆ ಮುಡಿಪಾಗಿ ಹಿರಿಯರಿಂ ಕೀರ್ತಿ
ಯನೆ ಹೊತ್ತು ಹೆಚ್ಚಿರ್ದ ಮಾಣಿಕ್ಯ ಮಣಿಮಕುಟದಿಂ ಭೂಷಿಸುವ ಶಿರದ
ಮೇಲ್ ಬೆಳೆದು ಕೆದರಿರ್ದ ಗುಜ್ಜುಕೂದಲನೊತ್ತಿ ಮುಡಿಕಟ್ಟಿ ಪೂರ್ವಾ
ಹ್ಣದೊಳ್ ಪರ್ಣಾದನಿಂ ಪಡೆದಿರ್ದ ಶಿವನಡಿಯ ಪಾವನತರ ಪ್ರಸಾದ
ಮಂ ಮುಡಿದು ಸಾಂಕೇತದಿಂ ತೇರನೆಳೆದೆಳೆದು ತಂದಿರ್ದ ವಾಜಿಗಳ ಬಳಿ
ಸಾರಿ ಮೈಮುಟ್ಟಿ ಬೆನ್ನಸವರಿಸಿ ಹಸಿಯ ಹುಲ್ಲಿನ ಮೇವನೊಲಿದಿತ್ತು ಮತ್ತ
ವುಗಳಂ ಪಾಲಿಸುವ ಹೊಣೆಸಹಿತ ದುಷ್ಟಶಾಸನಕಾಗಿ ಧನುವಧರಿಸುವ
ಕೈಯ್ಯ ಸ್ವಾಧಿಕಾರದ ಚಾಟಿಯಂ ಕೋಸಲೇಶನ ಜತೆಯ ಸಾರಥಿಯ
ವಶಕಿತ್ತು ಸಿದ್ಧನಾದಂ ಬಳಿಕ ಸಹಜಧರ್ಮಕೆಸಂದು ಬಹುದಿನದ ತಪ
ದಿಂದೆ ಬಳಲಿರ್ದ ಗಿರಿಜಾತೆಯಂ ಸಂತೈಸಿ ವರಿಸಲನುವಾಗಿ ಪೊರಟಿರ್ದ
ಪರಶಿವನ ತೆರದಿ.

ಮುಂದಾಗಿ ದೂತಿಯರ್ ತೆರಳುತಿರಲಾ ಸಾಹಸಿಕ ಪರ್ಣಾದ ತಾಂ
ಬೆನ್ನಹಿಂದೆಯೆ ಬರುತಿರಲ್ ಮಧ್ಯಗತನಾ ಬಾಹುಕಂ ಕಾರ್ತಿಕದ ಕರಿ
ಮುಗಿಲಿನೋಲ್ (ನಡೆಯುತಿರ್ದಂ ಮುಂದೆ) ನಡೆನಡೆದು ರಾಜಬೀದಿ
ಯದಱಂಟಿ ಮಹಾದ್ವಾರಮಂ ಪೊಕ್ಕು ಪೂದೋಂಟದಾ ಕೊಳದ ತೀರ
ದೊಳಲ್ಲಿ "ಅಲ್ಯಲ್ಲಿ, ಇಲ್ಲಿ ಇಲ್ಲೆ" ನುತೆ ಬೆಂಗಡೆಯ ಭೂಸುರಂ ಬಟ್ಟೆಯ
ನ್ನರುಹುತಿರೆ ತಗ್ಗಿಸಿದ ಪ್ರಖರಕಿರಣಂಗಳಿಂ ಕೊಳದ ಕಮಲಂಗಳಂ
ಬೋಳೈಸಿ ಮುದುಡಿಸುತೆ ವಿರಹಿಗಳನಲ್ಮೆವೇಟಂಗಳಂ ಕೂಡಿಸುವ ತವಕ
ದೊಳ್ ಕಾಲಮುನ್ನನುಗೊಳಿಸಿ ಹೊಂದಿಸುತೆ ಜೊನ್ನಪಾಲ್ ಮಳೆಗರೆದು
ಕೊಳದಕುಮುದಂಗಳಂ ಮುದಗೊಳಿಸೆ ಬಾಂದಳದಿ ಕುಮುದಬಾಂಧವನೆ
ಬಂದಪುದು ಮೇಲೆಂದು ಸಾರುತ್ತೆ ತನಗಾಗಿ ಕಾದಿರ್ದ ಪಶ್ಚಿಮದಿಶಾ ವನಿತೆ
ಯಂ ಕಾಂಬ ಸಂಭ್ರಮದಿಂದೆ ತಗ್ಗಿನೊಳ್ ನಲಿನಲಿದು ಸಾಗುತಿಹ ಕರ್ಮ
ಸಾಕ್ಷಿಯ ಕಂಡು ಕೈಮುಗಿದು ನಡೆದ ಮುದದಿ.

ಪ್ರಾಣಕಾಂತನ ಕರೆದು ತಾ ನೀನೆಂದು ಕೆಳದಿಯನ್ನಟ್ಟಿರ್ದ ದಮ
ಯಂತಿತಾಂ ಮತ್ತವಳ ಮಾತಿನಾ ಭರವಸೆಯ ಬಲದಿಂದೆ ತನ್ನಾಸೆ ಫಲವ

ತಂದಪುದೆಂದು ಸೊಗದ ಸಿರಿ ಸಾಮ್ರಾಜ್ಯಮಂ ಕನಸಾಗಿ ಕಾಣುತ್ತೆ ತನ್ನ ರಸನಾ ದಿವ್ಯತರ ದರ್ಶನದ ಭಾಗ್ಯಮಂ ಭೀಷ್ಮಕನ ಮನೆಯ ದೈವದ ಗುಡಿಯ ಕಾಳಿಕಾಭವನದೊಳ್ ಪಡೆದಪುದೆ ಧರ್ಮವೆಂದರಿದು ಸಾರ್ದಲ್ಲಿ ಶಿವೆಯನತಿಶಯದ ಭಕ್ತಿಯಿಂ ಪೂಜಿಸುತೆ (ಧರೆಯಮರ ದಂಪತಿಯರಂ ಬರಿಸಿ ಬಾಗಿನವಿತ್ತು) ನಳನರಸಿ ಬಳಿಕಾ ಸುಮಂಗಲೆಯರಂ ಕರೆಸಿ ಕಾಲ್ಪಿಡಿದು ಪಣೆಯ ಕುಂಕುಮವಿಟ್ಟು ಮುಡಿಗೆ ಹೂವಿಟ್ಟು ಬೀಳ್ಕೊಟ್ಟಳಾ ಬಂದವರದೆಲ್ಲರುಂ "ಭಾಗ್ಯಶಾಲಿನಿಯಾಗು ಬಹುಕಾಲ (ಬಾಳು ಭೀಷ್ಮಕನ ಮಗಳೇ ನಲ್ಲನಂ ಕೂಡಿ ಭಾಗ್ಯಶಾಲಿನಿಯಾಗು ಬಹುಕಾಲ ಬಾಳು) ನೀನೆಂದು ಪೂರ್ಣ ಸಂತಸದಿಂದೆ ಹಾಡಿಹರಸುತ್ತೆ ಹೋಗುತಿರಲು.

ಮಂದಾರ ಬಕುಳ ಪಾದರಿ ಪಾಟಲಂಗಳ ಸುತ್ತಿ ಪ್ರಾಣಮಂ ಪೀರ್ದು ಕಾಯಮಂ ಕೆಡಹುತಿಹ ಕಾಲನೋಲ್ ಪರಿಮಳವನೆತ್ತುತ್ತೆ ಪೂವ್ಗಳಂ ಬೀಳಿಸುತೆ ಮತ್ತಂತೆಯೇ ಬೃಂದಾರಕರತೆರದಿಂದ ಸುಮವೃಷ್ಟಿಯಂ ಧರೆಗೆ ಸುರಿಸುತ್ತೆ ಗಂಧವಾಹಂ ಬಳಿಕ ಸುರಗಿ ಸುರಹೊನ್ನೆ ಪುನ್ನಾಗ ಕರವೀರ ಚಂಪಕಂಗಳನೆಲ್ಲ ಬಳಬಳಿಸಿ ಬಳಿಯ ತಿಳಿಗೊಳದ ನೀರಿನೊಳ್ ಮಿಂದೆದ್ದು ಅಳಿದುಳಿದ ಪಂಕಜದ ಗಂಧಮಂ, ಭಂಗಾರ ಕೊಪ್ಪಾದ ಸೇವಂತಿಯಲರ ಸೌಗಂಧಮಂ ಮೇಣರಿಬಿರಿದ ಪಾರಿಜಾತದ ಕಂಪನುಂ ಪೊತ್ತು ಮತ್ತಲ್ಲಿ ಹುಲುಸಾಗಿ ಬೆಳೆದು ಬಿರಿದಿರ್ದ ತರತರದ ಮಲ್ಲಿಕಾಸುಮರಾಜಿಯೊಳ್ ನುಸುಳಿ ಮರಿಮಳಗೊಂಡು ಪಡೆದಿರ್ದ ಸಕಲ ಸೌರಭ ರಾಶಿಯಂ ಸಾಮ್ರಾಜನಿಂಗೋತು ಸೇನಾನಿಯೊಪ್ಪಿಸಿದ ಗೆದ್ದ ರಾಜ್ಯದ ಕೊಳ್ಳೆಯೋಲ್ ಮುಡಿಪಾಗಿ ಬಾಹುಕಂಗರ್ಪಿಸುತೆ ತಳುವದಾಗಲೆ ವಿವರಮಂ ಪಿಸುಣನೋಲ್ ವೈದರ್ಭೆಗೊಪ್ಪಿಸುತೆ ಮನ್ಮಥನ ಚೈತ್ರಯಾತ್ರೆಯಂ ಸಾರಿರ್ದನು.

ಬಾಹುಕನ ಮೈಮುಡಿಗಳಂ ಸೋಕಿ ಬೀಸಿರ್ದ ತಂಗಾಳಿ ತಾಂ ತೀಡುತೊಯ್ಯನೊಯ್ಯನೆ ಬಂದು ಶಾಂಭವಿಯ ಮಂದಿರದಿ ಸುಳಿಸುಳಿದು ಬಳಿಯೊಳಿನ್ನಾರುಮಿಲ್ಲದಿರೆ ಪೂರ್ಣ ಪ್ರಭೆಯೊಳು ಬೆಳಗಿ ಜ್ಯೋತಿಯಂ ಬೀರುತಿಹ ಗುಡಿಯ ದೀಪದ ಮುಂದೆ ಜೀವನದ ಬೆಳಕನೊಲಿದೀವ

ಚೈತನ್ಯದೀಪವಿದೆಂದು ತೋರುತಿರ್ದಂತೆ ತನ್ನಾಣ್ಮನಂ ಚಿಂತಿಸುತೆ ಮೊಣಕಾಲನೂರಿ ಕೈಯೆರಡರಂ ಜೋಡಿಸುತೆ ಜಗದಂಬೆಯಂ ಬೇಡುತಿಹ ನಳನರಸಿಯಂ ನೋಡಿ ಮತ್ತವಳ ಮೇಲುಂದವನೋಸರಿಸಿವಿರಹದುರಿಯಿಂ ಬೆಂದು ಬಳಲಿರ್ದ ಹದಿಬದೆಯ ಹೃದಯದೊಳ್ ನಳನೃಪಾಲನ ದಿವ್ಯತರ ಮೂರ್ತಿಯಂ ಕಂಡು ಬೆರಗಾಗಿ ಬಾಹುಕಂಗೆಲ್ಲಕಪ್ಪವನಿಲ್ಲಿಯೇ ಕೊಟ್ಟಪುದು ಮೇಲೆಂದು ಕಂಪಿನಾಹೊರೆಹೊರೆಯ ತಂದಿಳಿಸಿ ತಂಪಾಗಿ ಬೀಸುತ್ತಿತ್ತು.

ಮಾರಹರನರ್ಧಾಂಗಿಯಂ ಬೇಡುತಿರ್ದಂತೆ ಹೃದಯದುದ್ವೇಗ ತಾಂ ಪೆರ್ಚುತಿರೆ ದಮಯಂತಿ ತಾಂ ತಂಗಾಳಿಯೂಡಿರ್ದ ಕಂಪು ತಂಪಿನ ಸೋಂಕಿನಿಂ ಕುದುರಿರ್ದ ತನ್ನಾಸೆಯಂ ತಡಯಲಾರದೆ ಮುಂದೆ ಗಿರಿಸುತೆಗೆ ಹಣೆಚಾಚಿದೋಲ್ ಹಾ! ನಲ್ಲ! ಹಾ! ನಿನ್ನನಿನ್ನುಂ ಕಾಣೆನಲ್ಲ. ಎಂದು ಹವ್ವೈಸಿ ಧರೆಗೊರಗೆ ಪಂಜರದ ರಾಜಕೀರಂ "ನಲ್ಲನಲ್ಲಾ ನಳನಲ್ಲಾ" ಎಂದೊದರುತಿರ್ದಂತೆ ಶಾರಿಕೆಯೊಂದು "ನಲ್ಲನಿಲ್ಲ, ನಳನಿಲ್ಲ" ಎಂದು ಸುರಿ ಹಾರುತಿರೆ ದೇಗುಲದ ಘಂಟೆಯಂ ಬಡಿಬಡಿದು ಪರ್ಣಾದ ನೋಡುತಿರೆ ಏನಿದೇನಂದರಿವೆ ತಾನೆಂದು ನಳನರಸಿ ತಾಂ ಗುಡಿಯ ಹೊರಗಡೆ ಬಂದು ನೋಡುತಿರೆ ಮುಂದೊಮ್ಮೆ ಬೆಳಗಿನೊಳ್ ಕಂಡಿರ್ದ ಬಾಹುಕನನೇ ಕಂಡು ಭಯಗೊಂಡು ಚೀರುತ್ತೆ ಹರ! ಹರಾ! ಮೂರ್ಛೆಯೊಳ್ ದಿಂಡುರುಳಿ ಬರಿನೆಲದ ಮೇಲಲ್ಲಿ ಬಿದ್ದಿರ್ದಳು.

ತನ್ನೊಡತಿ ಚೀರ್ದುದಂ ಕೇಳ್ದೊಡನೆ ಬಾಗಿಲೊಳಲ್ಲೆ ಕಾದಿರ್ದ ಕೇಶಿನಿಯುಂ ತಾಂ ಧಾವಿಸುತ್ತತಿಶೀಘ್ರದೊಳ್ ಬಳಿಗೈದಿ ಬಿದ್ದಿರ್ದಾಕೆಯಂ ಸಾವರಿಸಿ ಮಲಗಿಸುತೆ ಹಣೆಗೆ ನೀರೊತ್ತಿ ಸೆರಗಿನೆಲರಿಂ ಬೀಸಿ ದುರ್ಗಾಂಬಿಕೆಯ ಸಿರಿಯಡಿಯನರ್ಚಿಸಿದ ಕುಂಕುಮವ ತಂದೊಡನೆ ಪಣೆಗಿಟ್ಟು ಕೆದರಿರ್ದ ನೊಸಲ ತಿಲಕವ ತಿದ್ದಿ ತಿರುಗುತಿರೆ ನೆಲವನೇ ನೋಡುತ್ತೆ ನಿಂದಿರ್ದ ಬಾಹುಕನ ಮೂರ್ತಿಯಂ ಕಂಡು ಹುಸಿಮುನಿಸಿನೊಳ್ ನಸುನಕ್ಕು ಮತ್ತೋಡಿನಿಲ್ಲದರಸುತೆ ದರ್ಪಣವನೊಂದಂ ತಂದು ನೈಷಧನ ಕೈಗಿತ್ತು 'ಹುಂ'ಕಾರದಿಂ ನಕ್ಕು ಘರ್ಜಿಸುತೆ ಸೆರಗನೆಳೆದೆಳೆದು ಭರದಿಂದ ಕಾಲ್ತೆಗೆದಳು.

ಕೈಗೆ ಕನ್ನಡಿಯಿತ್ತು ನಸುನಕ್ಕು ತನ್ನನೀಡಿಸುತೆ ನಡೆದಿರ್ದ ಸಾಹಸಕೆ ತಲೆದೂಗಿ ಬಾಹುಕಂ ಕೀಳ್ಪಿಸೆಗೆ ಸಂದಂದು ತನ್ನ ವಂಶದ ಮಾನಮಂ ಬಚ್ಚಿಟ್ಟು ಕಾದಿರ್ದ ವಿಷದುರಿಯ ರೂಪಮಂ ನೋಡಿದಪೆ ತಾನೆಂದು ತನ್ನಾಕೆಹಂದರದಿ ಹಾರವಂ ಹಿಡಿದು ನಿಂದಂದು ಥಳಥಳಿಸಿ ಹೊಳೆದಕದಪಿನ ತೆರದಿ ಮಿರಮಿರನೆ ಮಿರುಗುತಿಹ ಮುಕುರದೊಳ್ ತನ್ನ ತಾಂ ನೋಡುತಿರೆ ಕಂಡನಾತಂ ಬೇರೋರ್ವ ಬಾಹುಕಂ ಪೊಣ್ದು ಮೊಗದೋರ್ದನೆನೆ ತನ್ನ ಪ್ರತಿರೂಪವೆಂದೆಂಬುದಂ ತಾನೆ ನೆರೆದು.

ಪ್ರತಿರೂಪ ಪ್ರೇತವಂ ಕಂಡುನೋಡುತಿರ್ದಂತೆ ಮತ್ತುಮತ್ತದನೆ ನೋಡಲಾರದೆ ನೈಷಧಂ ಕನ್ನಡಿಯನತ್ತ ಕೆಲಕಿಟ್ಟು ಕಣ್ಮುಚ್ಚಿನಿಂದಿರ್ದೊಡಂ ಮನದೊಳಾರೂಪಮೇ ಕಾಣುತಿರೆ ಕಂಡು ಭಯಗೊಂಡು ಮೂರ್ಛಿತಳಾದ ತನ್ನಾಕೆಯುಂ ನೆನೆದು ಚಿಂತಿಸುತೆ ಸದ್ಗುರುವಿನುಪದೇಶ ಮುಖದಿಂದೆ ಜಡಮಾದ ನಿಜತನುವಿನಸ್ಥಿರತೆಯುನ್ನರಿತು ತನ್ನ ತಾಂ ತಿಳಿದಿರ್ದ ಶುದ್ಧಾತ್ಮನೋಲ್ ಜೀವನದ ಸುಸ್ನೇಹಮುಯು ಬೆಳಕನೊಲಿದೀವದೀವಿಗೆಯುಲಿ ಜ್ಞಾನ ಜ್ಯೋತಿಯೆ ಬೆಳಗುತಿಹುದಂ ಕಂಡು ಸತ್ಯಪಥ ಪಂಥದಾ ದೃಢತೆಯಿಂ ಮಂದಿರದ ಮಹಾದೇವಿಯುಂ ವಂದಿಸುತೆ ಪಕ್ಷಿಗಳ್ ತಂದಿತ್ತ ತನ್ನುಡೆಯನಾ ಕಿರುಗಂಟಿನಿಂದೆಳೆದು ಧರಿಸುತ್ತೆ ಪರಶಿವನ ಭಕ್ತಿಯೊಳ್ ಪ್ರಾರ್ಥಿಸಿದನು.

ಅನಿತರೊಳ್ ಪಟ್ಟಣದ ಶಿವಗುಡಿಯ ಘಂಟೆಗಳ್ ಚಂದ್ರಶೇಖರನೊಲ್ಮೆಯುಂ ಸಾರುತಿರ್ದಂತೆ ಮೊಳಗುತಿರೆ ನೈಷಧನನಾ ಕಾಲಕಾಲಂ ಸಕಾಲದೊಳ್ ಕಾಲನನುಜನ ಬಾಧೆಯಿಂ ಬಿಡಿಸುತ್ತೆ ವೈಧರ್ಜೆಯಾ ಕೊರಳ ಕರ್ಮಣಿಯ ಸೂತ್ರದೊಳ್ ಬಿಗಿದಿರ್ದನೆನೆ ಬಾಹುಕನ ಕಂಡಂಜಿ ಕಣ್ಮುಚ್ಚಿ ಮೈಮರೆದು ಬಿದ್ದಿರ್ದ ದಮಯಂತಿತಾಂ ವಲ್ಲಭಂ ಕಟ್ಟಿರ್ದ ಮಾಂಗಲ್ಯಮೊಂದಲ್ಲದೇನಂ ಧರಿಸದಾ ಕಂಬುಕೊರಳಿನ ಮೇಲೆ ತೊಟ್ಟಿಕ್ಕುವಾ ಬೆಚ್ಚನೆಯಕಂಣೀರಿನಿಂದೆಚ್ಚರಂಗೊಂಡು ಘಂಟಾನಿನಾದಮಂ ಕೇಳ್ದು ಕಣ್ದೆರೆದು ಮೇಲೇಳುತಿರೆ ತುಂಡಾಗಿ ಹರಿದಿರ್ದ ತನ್ನ ಮೊದಲಿನ ಸೀರೆಯಾ ತುದಿಸೆರಗನೆರಡುಕೈಯಿಂ ಪಿಡಿದು ಮುಂಡಿಯುನ್ನೂರಿ ಬಾಷ್ಪಲೋಚನನಾಗಿ ನಿಜರೂಪದಿಂ ದುಃಖಿಸುವ ತನ್ನರಸನಾ ನೈಷಧೇಂದ್ರನ ಕಂಡಳಾ ನಳನ.

ಕಂಡೊಡನೆ ಕೌತುಕದಿ ಕಣ್ಗಳಂನಂಬದೆಯೆ ತನ್ನ ಕಣ್ಣೆರಡರಂ ಹೊರಳಿಸುತ್ತುರಳಿಸುತೆ ಕಂಡಾತನಂ ಮತ್ತುಮತ್ತಡಿಗಡಿಗೆ ನೋಡುತಿರ್ದಂತೆ ಕಂಡಾತನೇ ಕಾಣುತಿರೆ ಕನಸಲ್ಲಮಿದು ಕಾಂಬುದಾಂ ಕಾಂತನಂ ಎಂದರಿದು ಬೆಕ್ಕಸಂಗೊಂಡು ಮಾತಾಡಲರಿಯದೆ ಸುದತಿ ತಾಂ ಮೌನದೊಳ್ ನಿಂದಿರಲ್ ನಳನೃಪಂ ಮಾತಿಲ್ಲದೆಯೆ ಕಳವಳದಿ ಮೂಕತೆಯು ನಾಂತಿರ್ದನು.

ನೀರನೀರೆಯರಿರ್ವರುಂ ಮೌನದೊಳೆ ಲೀನವಾಗಿರ್ದಾವುದೋ ಭಾವದಿಂ ಮಾತಾಡಲಾರದೆ ಮುಂದೆ ಮೊಗಮೊಗವ ನೋಡುತ್ತೆ ಹೊಸದಂಪತಿಗಳೋಲ್ ನಿಂದಿರಲ್ ಸಂತಸದೊಳಾ ಹೃದಯಂಗಳುಕ್ಕೇರಿ ಹರಿದುಬರೆ ರೋಮರೋಮಂಗಳೊಳ್ ಹರ್ಷರಸ ಚಿಮ್ಮು ತೋರಂತೆ ಕಣ್ಣಿನೊಳ್ ಧಾರೆಗೊಂಡಾಕ್ಷಣದೊಳೈಕ್ಯತೆಯ ನಾಂತಿರ್ದುದೆನೆ ಬಹುಕಾಲದಿಂ ಸತಿಗೆದರ್ಶನವನೀಯದೆಯೆ ವಿಪದುರಿಗೆ ತುತ್ತಾಗಿ ವಿಕಾರತರ ರೂಪಮುಂಪಡೆದು ಪರಸೇವೆಯೊಳ್ ತನುವ ಬಳಲಿಸುತೆ ಮತ್ತದೇ ಪುಣ್ಯಮಯಸಮಯದೊಳ್ ರಾಹುನಿರ್ಮುಕ್ತ ಚಂದಿರನ ತೆರದಿಂದೆ ತನ್ನಾಕೆಯೆದೆಯೊಲ್ಮೆಯಾಗಸಕೆ ಬಂದಿರ್ದ ನಳನೃಪಾಲನ ಪಾದಕಮಲಂಗಳಂ ತೋಯಿಸಿತು. ಮತ್ತಂತೆಯೇ ತನ್ನರಸನಡಿದಾವರೆಗಳಂ ಮುಡಿಯೊಳಿಟ್ಟನುಭವಿಪ ಪುಣ್ಯಮಯ ಭಾಗ್ಯಮಂ ಬಹುದಿನಂಗಳವರೆಗೆ ತಾಂ ಪೊಂದಲಾರದೆ ನೊಂದು ಬೆಂಡಾದ ಮಹಾಸತಿಯ ಶಿರದ ಮೇಲ್ ನಳನೃಪನ ಕಣ್ಣೀರ ಗಂಗಾಭಿಷೇಕವದಾಯ್ತು ಪತಿದೇವನಂ ಕಾಲ್ಪಿಡಿದು ವಂದಿಸಿದ ವೈದರ್ಭಿಯಂ ನೈಷದಂ ಪಿಡಿದೆತ್ತಿ ತಕ್ಕೈಸಿ ತಪ್ಪನೊಪ್ಪುವತೆರದಿ ಮುದ್ದಾಡುತಿರಲು.

ಮುಂದಾನಿಲಂ ಮೆಲ್ಲಮೆಲ್ಲನೆ ತೀಡುತಿರೆ ಮಲ್ಲಿಗೆಯ ಬಂಡುಂಡು ಮರಿದುಂಬಿಹಾಡುತಿರೆ ಪ್ರಕೃತಿ ತಾಂ (ರೌದ್ರತೆಯ ತೊರೆದು) ರಮ್ಯತೆಯ ನಾಂತಲ್ಲಿ ನಲ್ಲನಲ್ಲೆಯರ ಪೂರ್ಣಾನುರಾಗಮಂ ಪೆರ್ಚಿಸುತೆ ಶೃಂಗಾರದೊಸಗೆಯಂ ಕರುಣಿಸಲ್ ದಂಪತಿಗಳೊಂದಾಗಿ ಸವಿಸೊಗದ ಸೊದೆಯೊಂಟಿ ಕಳೆದಿರ್ದ ತಮ್ಮೆಲ್ಲ ಕಷ್ಟಮುಂ ಮೇಣ್ ವಿರಹಮುಂ ಮರೆದಿರ್ದ ಮಧುರ ಮಧುಮಯ ಸಮಯದೊಳ್ ದೂತಿಯರ ಮುಖದಿಂದಲೀ

ವಾರ್ತೆ ಕೇಳ್ದೊಡನೆ ದಮಯಂತಿಯಮ್ಮೈತಾನೋಡಿ ಬಂದಳು. ಮತ್ತೆ ಪರ್ಣಾದನಿಂದರಿದು ಭೀಷ್ಮಕಂ ಋತುಪರ್ಣನಂ ಕೂಡಿ ಬಂದೊದಗೆ ಬಂಧುಗಳ್ ಪುರಜನಂ ಪರಿಜನಂ ಬಂದು ಬಂದಾನಂದಮಂ ಪೊಂದೆ ಕುಕಿಲುತಿಹ ನವಿಲಿನೋಲ್ ನಗುನಗುತೆ ಬರುತಿರ್ದ ಕೇಶಿನಿಯು ಜತೆಯಿಂದೆ ವೈದರ್ಭೆತಾಂ ಪೆತ್ತ ನೈಷಧನ ಮಕ್ಕಳೀರ್ವರು ಬಂದುಬಾಂಧ ವರ ಮಧ್ಯದೊಳ್ ತಂದೆತಾಯ್ಗಳ ಕಂಡು ನೆಗೆದೋಡಿ ಮತ್ತವರ ಕೈಗಳಂ ಪಿಡಿದು ಬಿಡದೆಳೆದು ಕೇಕೆಹಾಕುತ ನಲಿದು ಹರ್ಷಿಸಿದರಾ ಪಡೆದವರ ಸಂತಸದ ಪೊಂಗುಡಿಗೆ ರನ್ನದಾ ಕಲಶವಾಗಿ.

ಮಂಗಲದ ಸುಸ್ವರದ ತೂರ್ಯಂಗಳಾ ದಂಪತಿಗಳಂ ಪಾಡಿ ಪೊಗಳು ತಿರೆ ಶೀತಾಂಶು ತಾಂ ರಾಮಣೀಯಕವಾಗಿ ಬೆಳ್ದಿಂಗಳಂ ಚೆಲ್ಲು ತಿರೆ ಜಗದಂಬೆಯಂ ವಂದಿಸುತೆ ಹದಿಬದೆಯರರಸಿ ತಾಂ ಪತಿಪಾದಮಂ ಮುಟ್ಟಿ ಬಂಧುಬಾಂಧವರ ಮಧ್ಯದೊಳ್ ಲೋಕಕ್ಷೇಮದ ಹರಕೆಯಂ ಹೊತ್ತು ಹಾಡಿದಳಲ್ಲಿ ಸರ್ವಮಂಗಳೆಯರಸನಂ ಕೊಂಡಾಡಿ ಬೇಡಿ.

ನೂರಾರಶಿಣಿಕೆಯೊಳ್ ತುಂಬಿರ್ದ ಸಂಸಾರಮೆನಿತೆನಿತೋ ವಿವಿಧ ದುಃಖಂಗಳೊಳ್ ತೊಳಲುವ ಜಗಂ ಬಡತನದ ಬಡಬನಿಂ ಬೆಂದು ಬಳ ಲುವ ಕೋಟಿಕೋಟಿಯ ಜನಂ ಧರ್ಮಜಾಗೃತಿಯಾಗಿ ಪಶುಪತಿಯ ಕರು ಣದೊಳ್ ನಿಚ್ಚಮಾ ಶಾಶ್ವತದ ಸಂಪತ್ತಿನಿಂ ಬದುಕಿಬಾಳಲಿ ಧರ್ಮದಿಂದೆ.

ಸುಖವು ಶಾಶ್ವತವಲ್ಲ ದುಃಖ ಶಾಶ್ವತಮಲ್ಲ ಸುಖದುಃಖದಾಸೂತ್ರ ಹಸ್ತದ ವಿಧಿಯೆ ಶಾಶ್ವತ ಸತ್ಯಮಾಹುದು ವಿಧಿವಿಲಾಸಕೆ ಸಂದ ಜಗವು ಸ್ಥಿರವಲ್ಲ, ಜನತೆ ಸ್ಥಿರವಲ್ಲ ಜಗದಜೀವರ ಧರ್ಮಸ್ಥಿರವು. ಹುಟ್ಟಿನಿಂದಲೆ ಸಾವ ಹೊತ್ತು ಹುಟ್ಟುವ ಜನಂ ಹುಟ್ಟಿ ಸಾಯುವ ಕಾಲದವಧಿಯಾಬಾಳಿ ನೊಳು ಧರ್ಮದಿಂ ಜೀವಿಸುವ ಕರ್ಮಮೋ ಧರ್ಮಮಯವು ಮತ್ತಲ್ಲೆ ಧರ್ಮದಿರವು. ಧರ್ಮದಿಂದಲೆ ಅರ್ಥ ಧರ್ಮದಿಂದಲೆ ಕಾಮ ಮೇಣ್ ಧರ್ಮದಿಂದಲೆ ಮೋಕ್ಷಪಥ ಮತ್ತದೇ ಧರ್ಮದರಿವು.

ಮನೆಮನೆಯ ಕತ್ತಲೆಯನಾಕೈಯ್ಯಮಣಿದೀಪ ಬೆಳಗಿದೋಲ್ ಜ್ಞಾನವಜ್ಞಾನದಾ ಹೃದಯಂಗಳಂ ಬೆಳಗಿಪುದು ಮತ್ತಂತೆಯೇ ಧರ್ಮ ತಾಂ ಬೆಳಗಿಪುದು ಜಗವಾ.

ಜಗಕೆಲ್ಲ ಬೆಳಕಿತ್ತು ಬೆಳಗಿದಾ ಜಗದ ಬೆಳಕಂ ಕೊಂಡು ಲೋಕ
ಲೋಕಂಗಳಂ ಕಾಣಿಸುತೆ ವಿಶ್ವತೋಮುಖ ಜ್ಯೋತಿಯಂ ಜೀವನಾನಂದ
ದೊಳ್ ಕರುಣಿಸುತೆ ಮರ್ತ್ಯದೊಳ್ ಅಮೃತತ್ವಮಂ ಪಾಲಿಸುವ ಧರ್ಮ
ದಾಸ್ಥಳವೆ ತಾಂ ಶಿವಶಕ್ತಿಯಿಂ ಮೇಣನ್ನಪೂರ್ಣೆಯ ಕೃಪಾಛತ್ರದಿಂ
ಕೂಡಿರ್ಪ ಕರ್ಮಭೂಮಿ.

ಮಂಜುವೆಟ್ಟಿನ ಕುವರಿಯಂ ಕೈಪಿಡಿದು "ಮಂಜುನಾಥಂ" ತಾನೆ
ನೆಸಿ ಸತಿಸುತರಸಹಿತಲ್ಲಿ ಭೂತಸಂಕುಲವೆರಸಿ ವಿವಿಧ ಧರ್ಮದ ಮರ್ಮ
ಮಂ ಬಲ್ಲವರ ಬಗೆಯಲ್ಲಿ ಬಲ್ಲಂತೆ ಬೀರುತ್ತೆ ಇಹಪರಕೆ ಸಾಧನಮಾದ
ಸರ್ವಸಂಪತ್ತಿಯಿಂ ಕೂಡಿರ್ದ ಸಂಸಾರದೊಳ್ ಧರ್ಮದರಿವಂ ಭಕ್ತ
ರಿಗೆ ಕರುಣಿಸುತೆ ಕರ್ಮಭೂಮಿಯೊಳಲ್ಲಿ ಕಾಣದೋಲ್ ಕಾಣಿಸುತೆ
ವಿಧಿ ಧರ್ಮ ಕರ್ಮ ಮೇಣ್ ಸತ್ಯ ಮಾಯೆಗಳೆಂಬ ಪಂಚ ಮುಖದಿಂ
ಪ್ರಪಂಚಮಂ ಪಾಲಿಸುವ ಶಿವನೇ ಪಾಲಿಸೆಮ್ಮಂ ನಿರತಮಾ ಹದಿಬದೆಯ
ಧರ್ಮಮಂ ಪಾಲಿಸಿದ ನಳನರಸಿಯಾ ಮಾಂಗಲ್ಯಮಂ ಕಾಯ್ದ ತೆರದಿ.

ಸತ್ಯಲೋಕದ ವಾಣಿಯೌ ಓ ದೇವಿ! ಜನ ಮನದ ಭಾವಮಂ
ವರ್ಧಿಸುತೆ ಕವಿಕುಲದ ಕೋಟಿಯಂ ಪೆರ್ಚಿಸುತೆ ಸುರಸಕಾವ್ಯದ ಸಂಪ
ದವನೀನೆ ಪಡೆದೆ. ಜಡಮತಿಯು ನಾನೆನಗೆ ನುಡಿಯ ಕಲಿಸಿದೆ ಜನನಿ!
ಕಾರುಣ್ಯದಿಂ ನೀನೆನ್ನ ನುಡಿಯಿಸಿದೆ, ಕನ್ನಡದ ಬಡತನದಿ ಬಲ್ಲಂತೆ ನಿನ್ನಡಿ
ಗಳಂ ಪೂಜಿಸಿದೆ ಕೊಳ್ಳಿದೋ ಕುಸುಮವಿದು ಓ ತಾಯೆ! ಬಿರಿಯದಾ
ಕಾಡಮಲ್ಲಿಗೆಯ ಬರಿಯ ಮುಗುಳು.

**ಶುಭಂ–ಮಂಗಲಂ**



ಪ್ರಿಯದರ್ಶನಂ

ಭಾಗ್ಯವಿದ್ದಾಗ
ಕೈಕಾಲ್ಗೆ ಜನರಿಹರು
ಅದನುಳಿಯೆ
ಭಾರ್ಯೆಯಲ್ಲದೆ
ಬೇರಾರು ಬಹರು?

ಈ ಲೇಖಕನ ಕೃತಿಗಳು:

1. ಭೀಷ್ಮಾರ್ಜುನ (ಯಕ್ಷಗಾನ ಅರ್ಥವಿವರಣೆ)
2. ಪ್ರಿಯದರ್ಶನಂ (ಪದ್ಯಗಂಧಿ ಗದ್ಯ)

(ಅಚ್ಚಿನಲ್ಲಿ)

3. 'ಧರ್ಮ'-'ದಾಸಿ' (ಏಕಾಂಕ ನಾಟಕ)
4. ಸುಭದ್ರಾರ್ಜುನ (ಯಕ್ಷಗಾನ ಅರ್ಥವಿವರಣೆ)



ಪುಸ್ತಕಗಳು, ಲೇಖಕನಲ್ಲಿ ಮತ್ತು

**ಭಾಗವತ ಎ. ಗಣಪಯ್ಯ, ಪುಸ್ತಕ ವ್ಯಾಪಾರಿ,**
**ಶ್ರೀ ರಾಮ ಟೆಂಪಲ್ ರೋಡ್, ಚೊಕ್ಕಾಡಿ, ದ. ಕ.**

ಇವರಲ್ಲಿ, ಅಲ್ಲದೆ ಹೆಚ್ಚಿನ ಎಲ್ಲಾ ಪುಸ್ತಕ ವ್ಯಾಪಾರಿಗಳಲ್ಲಿ ಸಹ ದೊರೆಯುತ್ತವೆ.

Printed at the Udaya Printery & Publications Ltd., Mangalore-3.